# ಮಾರ್ಗದರ್ಶಕರ ಪ್ರಮಾಣಪತ್ರ

ನಮ್ಮ ಸಂಸ್ಥೆಯ ಎಂ. ಫಿಲ್. ಪದವಿಯ ವಿದ್ಯಾರ್ಥಿಯಾದ, ಎಂ. ಎ. ರಂಜಿತ ಅವರು ನನ್ನ ಮಾರ್ಗದರ್ಶನದಲ್ಲಿ **"ಕೋಮು ಸೌಹಾರ್ದತೆಯನ್ನು ಬಿಂಬಿಸುವ ಮೂರು ನಾಟಕಗಳು"** ಎಂಬ ಶೀರ್ಷಿಕೆಯ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ, ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೋಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ : ಮೈಸೂರು**
**ದಿನಾಂಕ :** ೨೨.೦೮.೦೮

**ಮಾರ್ಗದರ್ಶಕರು**
ಉಪನ್ಯಾಸಕರು
ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ
ಚಾಮರಾಜನಗರ

# ಅಭ್ಯರ್ಥಿಯ ಘೋಷನಾಪತ್ರ

ಡಾ॥ ಎನ್. ಮಹೇಶ್ವರಿ ಉಪನ್ಯಾಸಕರು, ಜೆ.ಎಸ್.ಎಸ್. ಸ್ನಾತಕೋತ್ತರ ವಿಭಾಗ, ಚಾಮರಾಜನಗರ, ಇವರ ಮಾರ್ಗದರ್ಶನದಲ್ಲಿ **"ಕೋಮುಸೌಹಾರ್ದತೆ ಬಿಂಬಿಸುವ ಮೂರು ನಾಟಕಗಳು"** ಎಂಬ ವಿಷಯದ ಬಗ್ಗೆ ನಡೆಸಿದ ಅಧ್ಯಯನ ಫಲವೇ ಈ ನಿಬಂಧ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೋಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ : ಮೈಸೂರು**
**ದಿನಾಂಕ :** ೨೨.೦೮.೦೮

**ನಿಬಂಧಕಾರರು**
ಎಂ.ವಿ.ರಂಜಿತಾ
**ಕನ್ನಡ ಎಂ.ಫಿಲ್.**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಮೈಸೂರು

# ಕೋಮು ಸೌಹಾರ್ದತೆ ಬಿಂಬಿಸುವ ಮೂರುನಾಟಕಗಳು

('ರಾವಿನದಿಯ ದಂಡೆಯಲ್ಲಿ', 'ಜತೆಗಿರುವನು ಚಂದಿರ' ಮತ್ತು 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ')

## ಪರಿವಿಡಿ

## ಅಧ್ಯಾಯ – ೧

# ಕೋಮು ಸೌಹಾರ್ದತೆ ಬಿಂಬಿಸುವ ಮೂರು ನಾಟಕಗಳು

('ರಾವಿನದಿಯ ದಂಡೆಯಲ್ಲಿ', 'ಜತೆಗಿರುವನು ಚಂದಿರ' ಮತ್ತು 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ')

'ಕೋಮು ಸೌಹಾರ್ದತೆ' ಯೆಂಬುದು 'ಕೋಮು' ಮತ್ತು 'ಸೌಹಾರ್ದತೆ' ಎಂಬೆರಡು ಶಬ್ದಗಳಿಂದ ನಿಷ್ಪನ್ನವಾದ ಸಮಸ್ತಪದ. 'ಕೋಮು' ಎಂದರೆ ಜಾತಿ, ಸಮುದಾಯ, ವರ್ಗ, ಗುಂಪು, ಪಂಗಡ ಎಂಬರ್ಥಗಳಿವೆ. 'ಸೌಹಾರ್ದತೆ'ಯು ಸುಹೃದ್ ಅಥವಾ ಸಾಹೃದ್‌ದಿಂದ ಬಂದಿದೆ. ಹೀಗೆಂದರೆ ಸ್ನೇಹ ಆಕರ್ಷಣೆ ಪ್ರೀತಿ, ಸಹಕಾರ ಎಂದರ್ಥ ಈ ಎರಡೂ ಶಬ್ದಗಳು ಜೊತೆಗೂಡಿದಾಗ ಜಾತಿ–ಜಾತಿಗಳಲ್ಲಿ, ಸಮುದಾಯ–ಸಮುದಾಯಗಳಲ್ಲಿ, ಗುಂಪು ಪಂಗಡಗಳಲ್ಲಿ ಪರಸ್ಪರ ಸಹೃದಯತೆ, ಸ್ನೇಹಪರತೆ, ಸಹಕಾರ, ಸೌಜನ್ಯ ಇರುವುದು ಎಂದರ್ಥ.[೧]

ಮಾನವ ಸಮುದಾಯವು ತನ್ನ ವಿಕಾಸ ಕ್ರಮದಲ್ಲಿ ನಿರಂತರ ಬದಲಾಗುತ್ತಿರುತ್ತದೆ. ಕಾಲದಿಂದ ಕಾಲಕ್ಕೆ ಮತ್ತು ಮನೋಧರ್ಮಕ್ಕೆ ಅನುಗುಣವಾಗಿ ಬದಲಾವಣೆಯ ವೇಗ ಮತ್ತು ಪರಿಣಾಮಗಳಲ್ಲಿ ವ್ಯತ್ಯಾಸಗಳುಂಟಾಗುತ್ತದೆ. ಈ ಬದಲಾವಣೆ ಮುಖ್ಯವಾಗಿ ಆಯಾಯ ಕಾಲದ ಜನಜೀವನದ ಮೇಲೆ ಪರಿಣಾಮ ಬೀರುತ್ತದೆ. ಈ ಬದಲಾವಣೆಯಿಂದ ಉಂಟಾಗುವ ಪರಿಣಾಮಗಳು ಸಕಾರಾತ್ಮಕವಾಗಿದ್ದರೆ, ಸಮಾಜದ ನೈಜ ಪ್ರಗತಿ ಉಂಟಾಗುತ್ತದೆ. ನಕಾರಾತ್ಮಕವಾಗಿದ್ದರೆ ಅದರ ಸ್ವಾಸ್ಥ್ಯಹದಗೆಡುತ್ತದೆ. ಇದರ ಹಿನ್ನಲೆಯಲ್ಲಿ ಇಂದಿನ ಭಾರತೀಯ ಪರಿಸ್ಥಿತಿಯನ್ನು ಗುರುತಿಸಬಹುದು.

ಭಾರತ ಹಿಂದೆಂದೂ ಕಂಡರಿಯದಂತಹ ಬಿಕ್ಕಟ್ಟಿಗೆ ಇಂದು ಸಿಲುಕಿದೆ. ದೇಶದ ಬಹುಜನರ ಭಾವನೆ ಮತ್ತು ಬದುಕಿಗೆ ತೀವ್ರ ಸವಾಲೊಡ್ಡಿರುವ ಕೋಮುವಾದ ವ್ಯಾಪಕವಾಗುತ್ತಿದೆ. ಪರಸ್ಪರ ಸ್ನೇಹ – ಸಹ ಬಾಳ್ವೆ ಮತ್ತು ಶಾಂತಿಯುತ ಬದುಕಿಗೆ ಹೆಸರಾಗಿದ್ದ ಭಾರತೀಯ ಸಮಾಜ ಈಗ ಕ್ಷೋಭೆಗೊಳಗಾಗಿ ನರಳುತ್ತಿದೆ. ಧರ್ಮದ ಹೆಸರಿನಲ್ಲಿ ಜನರನ್ನು ಒಡೆದು ಛಿದ್ರ ಗೊಳಿಸಲಾಗುತ್ತಿದೆ. ಕೋಮುವಾದಿ ರಾಜಕೀಯ ಪಕ್ಷಗಳು ದೇವರು ಮತ್ತು ಧರ್ಮದ ಹೆಸರಿನಲ್ಲಿ ಜನರನ್ನು ಪರಸ್ಪರ ಎತ್ತಿಕಟ್ಟಿ ತಮ್ಮ ಅಧಿಕಾರದಾಹವನ್ನು ತೀರಿಸಿಕೊಳ್ಳುವ ಹವಣಿಕೆಯಲ್ಲಿದೆ.[೨]

---

೧: ಕನ್ನಡ ಸಾಹಿತ್ಯ: ಕೋಮು ಸೌಹಾರ್ದತೆ (ಪುಟ–೨೯)

೨: ಕೋಮುವಾದವನ್ನು ಹಿಮ್ಮೆಟ್ಟಿಸುವತ್ತಾ... (ಪುಟ–೨೬೩)

"ಧರ್ಮ ಜನತೆಯ ಅಫೀಮು' ಎಂದು ಕಾರ್ಲ್‌ಮಾರ್ಕ್ಸ್ ಹೇಳುವ ಹಾಗೆ ಈಗ ನಮ್ಮ ದೇಶದ ಸ್ಥಿತಿಯಾಗಿದೆ.

ಭಾರತದ ವಿಭಜನೆಗೆ ಮುಸ್ಲಿಂರು ಕಾರಣ ಎನ್ನುವ ಮತೀಯವಾದದ ಪ್ರಚಾರವನ್ನೇ ಪರಿಶೀಲಿಸಬಹುದು. ವಸಾಹತುಷಾಹೀ ಚರಿತ್ರೆಯನ್ನು ಅಭ್ಯಾಸ ಮಾಡಿದರೆ ಈ ದೇಶದ ಜನತೆಯಲ್ಲಿ ಪರಸ್ಪರ ವೈಷಮ್ಯವನ್ನು ತಂದಿಟ್ಟವರು ಬ್ರಿಟಿಷರು ಎನ್ನುವುದು ಯಾರಿಗಾದರೂ ಖಚಿತವಾಗಿ ತಿಳಿಯುವಂತಹದ್ದೇ. ಇದರ ಸಂಪೂರ್ಣ ಲಾಭವನ್ನು ತೆಗೆದುಕೊಂಡವರು ರಾಜಕಾರಿಣಿಗಳು. ಕೆಲವೇ ಕೆಲವು ಜನರ ಸ್ವಾರ್ಥತೆಯ ಮೇಲೆ ಜಾತೀಯತೆ, ಕೋಮುವಾದ, ಎಲ್ಲವೂ ಸೃಷ್ಟಿಗೊಂಡಿತು.

ಸಹಿಷ್ಣತೆ ಮತ್ತು ಅಸಹನೆ ಈ ಎರಡೂ ಗುಣಗಳೂ ಯಾವುದೇ ಧರ್ಮದ ಏಕಸ್ವಾಮ್ಯವೂ ಅಲ್ಲ; ಸ್ಥಿರವಾದ ಗುಣಗಳೂ ಅಲ್ಲ. ಪ್ರತಿಯೊಂದು ಧರ್ಮವೂ ಪರಧರ್ಮ ಸಹಿಷ್ಣತೆಯನ್ನು ಬೋಧಿಸುತ್ತಲೇ ಕಾಲದಿಂದ ಕಾಲಕ್ಕೆ ಅಸಹಿಷ್ಣುತೆಯನ್ನು ಕೂಡ ತೋರುತ್ತಾ ಬಂದಿದೆ. ವಸ್ತು ನಿಷ್ಠತೆ ಮತ್ತು ಆತ್ಮ ನಿಷ್ಠತೆಯ ಗುಣಗಳು ಮತೀಯವಾದಿಗಳು ಯೋಚನಾ ಕ್ರಮದಲ್ಲೇ ಇಲ್ಲವಾದ್ದರಿಂದ ಚರಿತ್ರೆಯ ಈ ಸತ್ಯಗಳತ್ತ ಅವರು ಕುರುಡರಾಗಿದ್ದಾರೆ.[೧]

ಜಾತಿ ಧರ್ಮವೆಂಬುದು ಅನಾದಿ ಕಾಲದಿಂದಲೂ ಇರುವಂತಹದ್ದೇ. ಕಾಯಕದ ಅನುಕೂಲಕ್ಕಾಗಿ ಮಾಡಿಕೊಂಡ ವರ್ಗವು ಇಂದು ಅನೇಕ ಜಾತಿಗಳ ಹುಟ್ಟಿಗೆ ಕಾರಣವಾಗಿ, ಮೇಲು-ಕೀಳು, ಅಸಹಿಷ್ಣತೆ, ಕೋಮುವಾದಕ್ಕೆ ಎಡೆಮಾಡಿಕೊಟ್ಟಿದೆ. ಕೋಮುವಾದವೆಂಬುದು ಇಂದಿಗೂ ಪ್ರಸ್ತುತ ವಿಷಯವಾಗಿದೆ. ಇಂದಿನ ನಾಗರಿಕ ಸಮಾಜದಲ್ಲೂ ಜನರು ಅನಾಗಕರೀಕರಂತೆ ವರ್ತಿಸುತ್ತಿದ್ದಾರೆ. ೧೨ನೇ ಶತಮಾನದಲ್ಲಿ ಬಸವಣ್ಣನವರು ಹೇಳಿದ "ದಯೆ ಇಲ್ಲದ ಧರ್ಮ ಯಾವುದಯ್ಯ" ಎಂಬ ಮಾತು ಇವತ್ತು ಅರ್ಥಕಳೆದುಕೊಂಡಿದೆ.

ದೇಶಕ್ಕೆ ಸ್ವಾತಂತ್ರ್ಯ ಬಂದಂತಹ ಸಂದರ್ಭದಲ್ಲಿ ದೇಶ ವಿಭಜನೆ ಯಾಗುವಾಗಲೇ ಕೇಳಿ ಬಂದಂತಹ ಮಾತು ಈ ಕೋಮುವಾದ. ಸೌಹಾರ್ದತೆ, ಶಾಂತಿ, ಸ್ನೇಹದಿಂದ ಹಿಂದೂ-ಮುಸ್ಲಿಂ ಎಂಬ ಬೇಧವಿಲ್ಲದೇ ಇರುವಂತಹ ನಾಡಿನಲ್ಲಿ ಕೆಲವು ಸ್ವಾರ್ಥ ರಾಜಕಾರಣಿಗಳ ಸ್ವಾರ್ಥಕ್ಕಾಗಿ ದೇಶದೆಲ್ಲೆಡೆ ಹರಡಿತು. ಈ ಕೋಮುವಾದ ಆಗ ಬೀಜವಾಗಿ ಮೊಳಕೆ ಒಡೆದು ಈಗ ಹೆಮ್ಮರವಾಗಿ ಬೆಳೆದು ನಿಂತಿದೆ. ಇದು ದೇಶದಲ್ಲಿನ ಜ್ವಲಂತ ಸಮಸ್ಯೆಯೂ ಹೌದು. ಇದಕ್ಕೆ ಪರಿಹಾರವನ್ನು ಇಂದಿನ ನಾಗರಿಕರಾದ ನಾವು ಕಂಡುಕೊಂಡು ದೇಶದ ಸ್ವಾಸ್ಥ್ಯವನ್ನು ಕಾಪಾಡಬೇಕಾಗಿದೆ.

ಈ ಕೋಮುವಾದದ ನಡುವೆಯೂ ಕೋಮು ಸೌಹಾರ್ದತೆಯು ಕಂಡುಬರುತ್ತದೆ. ಭಾರತದಲ್ಲಿ ೧೨ ಕೋಟಿ ಮುಸಲ್ಮಾನರು ಸೌಹಾರ್ದತೆಯಿಂದಲೇ ಇದ್ದಾರೆಯಾದರೂ ಮೂಲಭೂತವಾದಿಗಳ ಮನಸ್ಸು ಅವರನ್ನು ಅನುಮಾನದಿಂದಲೇ ನೋಡುತ್ತಿದೆ.

---

೧: ಮಾನವತೆಯ ತುಡಿತಗಳು, ಸಂ. ಬಿಸ್ಲೇಹಳ್ಳಿ ಪ್ರಭು. ಲೇಖನ – 'ರಥಯಾತ್ರೆಯ ಕುಟಿಲತೆ' (ಪುಟ –೧೧೫). ಜಿ. ರಾಜಶೇಖರ್.

ಇದು ಇಂದಿಗೂ ಪ್ರಸ್ತುತದ ಸಮಸ್ಯೆಯಾಗಿ ಕಾಡುತ್ತಿದೆಯಾದರೂ, ನಾಗರಿಕರಾದ ನಾವು ಈ ಧೋರಣೆಯನ್ನು ಬದಲಾಯಿಸಬೇಕು. ದೇಶದಲ್ಲಿ ಇರುವ ಬಡತನ, ನಿರುದ್ಯೋಗ, ವಸತಿ, ಈ ಸಮಸ್ಯೆಗಳ ಬಗ್ಗೆ ಗಮನ ಹರಿಸಬೇಕೇ ವಿನಃ ಮೂಲಭೂತಿಗಳಾಗಿ ಕೋಮುವಾದ, ಜಾತಿಯತೆ ಹೆಸರಿನಲ್ಲಿ ಸ್ವಾರ್ಥ ರಾಜಕಾರಿಣಿಗಳ ಕೈಗೆ ಸಿಲುಕಿ ನಮ್ಮ ದೇಶ ಮತ್ತು ದೇಶದ ಜನರು ಬಲಿಯಾಗಬಾರದು.

ಈ ಮೇಲಿನ ಅಂಶಗಳನ್ನು ಒಳಗೊಂಡಿರುವ ಮೂರೂ ನಾಟಕಗಳನ್ನು ಅಧ್ಯಯನಕ್ಕೆ ತೆಗೆದುಕೊಂಡು, ಚರ್ಚಿಸುವ ಉದ್ದೇಶವಿದೆ.

ಅನುವಾದ ನಾಕಟವಾದ **"ರಾವಿ ನದಿಯ ದಂಡೆಯಲ್ಲಿ"** ಕೋಮು ಸೌಹಾರ್ದತೆಯನ್ನು ನಾಟಕದುದ್ದಕ್ಕೂ ತಂದರೂ. ಅಂತ್ಯವಾಗುವುದು ವಾಸ್ತವವನ್ನು ಹೇಳುವ ದುರಂತದಲ್ಲಿ. ದೇಶ ವಿಭಜನೆಯಲ್ಲಿ ಪ್ರಾರಂಭವಾದ ಈ ಸಮಸ್ಯೆಯು ಪ್ರಸ್ತುತ ಜೀವನದಲ್ಲೂ ಇದೇ ಧೋರಣೆಯನ್ನು ಕಾಣಬಹುದಾಗಿದೆ. ಇದರಿಂದ ಹೊರಬರುವಂತಹ ಆಶಯ ಲೇಖಕರದ್ದಾಗಿದೆ.

ಮತ್ತೊಂದು ರೂಪಾಂತರ / ಅಳವಡಿಕೆ ನಾಟಕವಾದ **"ಜತೆಗಿರುವನು ಚಂದಿರ"** ದಲ್ಲಿ ಕೋಮುವಾದದ ಜೊತೆಗೆ ಹೊಸದೊಂದು ಸಂದೇಶ ಹೇಳುವ ಪ್ರಯತ್ನ ಲೇಖಕರದ್ದಾಗಿದೆ. ದೇಶವಿಭಜನೆಯ ವಿರುದ್ಧದ ಚಳುವಳಿ, ವಿಚಾರವಂತಿಕೆ, ಶಿಕ್ಷಣ, ಬಡತನದ ಚಿತ್ರಣ, ಎಲ್ಲವನ್ನೂ ಕಟ್ಟಿ ಕೊಡುತ್ತಾರೆ. ಶೀರ್ಷಿಕೆ ಹೇಳುವಂತೆ ಆಶಾವಾದದ ಕಿರಣ ಈ ನಾಟಕದಲ್ಲಿ ಕಂಡುಬರುತ್ತದೆ. ಸಮಾಜಕ್ಕೆ ಹೊಸದೊಂದು ವಿಚಾರವನ್ನು ಹೇಳುವ ಪ್ರಯತ್ನ ಈ ನಾಟಕದಲ್ಲಡಗಿದೆ.

**"ಚೂರಿ ಕಟ್ಟೆ ಅರ್ಥಾತ್ ಕಲ್ಯಾಣ ಪುರ"** ನಾಕಟದಲ್ಲಿ ನಾಗರಿಕ ಸಮಾಜದಲ್ಲಿ ನಾಗರಿಕರು ಅನಾಗರಿಕರಂತೆ ನಡೆದುಕೊಳ್ಳುವ ಚಿತ್ರಣವಿಲ್ಲಿದೆ.

ಮೂಲಭೂತ ವಾದಿಗಳು ಕೋಮುವಾದವನ್ನು ಬಿಂಬಿಸುತ್ತಿರುವ ಜೊತೆಗೆ ಇಲ್ಲಿ ತಂತ್ರಜ್ಞಾನದ ಆಗಮನವು ಕಂಡುಬರುತ್ತದೆ. ಇದು ಇಂದಿನ ಆಧುನಿಕ ಯುಗದ ಸತ್ಯವಾಗ ಬೇಕೆಂಬ ಆಶಯ ಲೇಖಕರದ್ದು ಎಂದು ಗುರುತಿಸಬಹುದಾಗಿದೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಈ ಮೂರು ನಾಟಕಗಳ ವಸ್ತು ಒಂದೇ ಆಗಿದ್ದರೂ ಅವು ಓದುಗರಲ್ಲಿ ಮೂಡಿಸುವ ಚಿಂತನೆಗಳು ಬೇರೆ-ಬೇರೆ. ಈ ಮೂರು ನಾಟಕಗಳು ಕೋಮುಸೌಹಾರ್ದತೆಯನ್ನು ಬಿಂಬಿಸಿದರೂ, ಅಲ್ಲಿನ ಪಾತ್ರಗಳ ಮೂಲಕ ಮೂವರು ಲೇಖಕರು ಸ್ಪಷ್ಟಪಡಿಸುತ್ತಿರುವ ವಿಚಾರಗಳಲ್ಲಿ ಅಗಾಧ ವ್ಯತ್ಯಾಸವಿದೆ. ಈ ವಿಚಾರಗಳು ನಮ್ಮಲ್ಲಿ ಜಿಜ್ಞಾಸೆಗಳನ್ನು ಹುಟ್ಟುಹಾಕುತ್ತದೆ.

ಈ ನಾಟಕಗಳಲ್ಲಿನ ದೃಷ್ಟಿಕೋನವನ್ನು ನೋಡಲು ಅಥವಾ ಸಮಸ್ಯೆಗಳನ್ನು ಅಧ್ಯಯನ ಮೂಲಕ ಪರಿಹರಿಸಿಕೊಳ್ಳಲು ಈ ನಿಬಂಧದಲ್ಲಿ ಪ್ರಯತ್ನಿಸಲಾಗಿದೆ.

ನಮ್ಮ ಸಮಾಜಕ್ಕೆ 'ಕೋಮುವಾದವೆನ್ನುವುದು ಒಂದು ರೀತಿಯ ವಿಷ' ಇದು ಸಮಾಜವೊಂದನ್ನು ಅಂಟಿಕೊಂಡರೆ ಆಗ ಬಹುದಾದ ದುರಂತಗಳೆಂತಹವುದು ಎಂಬುದಕ್ಕೆ ಇತಿಹಾಸದಲ್ಲಿ ನೂರಾರು ನಿದರ್ಶನಗಳಿವೆ. ಮಿಥ್ಯಗಳ ಆಧಾರದ ಮೇಲೆ ಜನಿತಗೊಳ್ಳುವುದೇ ಅಲ್ಲ; ಮಿಥ್ಯಗಳನ್ನೇ ಮುಂದಿಟ್ಟು ಬೆಳವಣಿಗೆ ಕಂಡುಕೊಳ್ಳುವುದು ಇದರ ವಿಶೇಷ ಗುಣವಾಗಿದೆ. ಅನಕ್ಷರತೆ–ಅಜ್ಞಾನಗಳಿಗಿರುವ ಪ್ರದೇಶಗಳು ಇದರ ಪ್ರಯೋಗಾಲಯಗಳು ಸಮಾಜದ ಕೆಳವರ್ಗಗಳು ಪ್ರಗತಿ ಪಥದೆಡೆಗೆ ಧಾಪು ಗಾಲಾಕಿಕೊಂಡು ತೆರಳಲು ಸಿದ್ಧಗೊಂಡಾಗ ಅದರ ಗತಿಗೆ ತಡೆಯೊಡ್ಡಲು ಆಳುವ ವರ್ಗಗಳು ಬಳಸುವ ಪ್ರತಿಕ್ರಮಾಸ್ತ್ರ ಸಾಮಾಜಿಕ ವಾಸ್ತವಿಕತೆಗಳನ್ನು ತಿರುಚಿ, ಸಮಾಜವೊಂದನ್ನು ವಿನಾಶಕಾರಿ ರೀತಿಯ ಭಾವೋತ್ಕರ್ಷದತ್ತ ನಡೆಸಬಲ್ಲ ವಿಕೃತ ಸಾಧನ.

ಸಮಾಜದಲ್ಲಿ ಅಸ್ತಿತ್ವದಲ್ಲಿರುವ 'ವರ್ಗಪ್ರಜ್ಞೆ' ಯನ್ನು ವ್ಯವಸ್ಥಿತವಾಗಿ ನಾಶಗೊಳಿಸಲು ಸಿದ್ಧಪಡಿಸಿದ ಅಸ್ತ್ರವಾಗಿ ಕಾರ್ಯ ನಿರ್ವಹಿಸುತ್ತಾ ಈವತ್ತಿನ ಜಾಗತೀಕ ದುಃಸ್ಥಿತಿಗೆ ತನ್ನ ವಿಕೃತ ಕೊಡುಗೆಗಳನ್ನು ಕೊಟ್ಟಂತಹ ಮಾನವ ಕುಲದ ಶತ್ರುವದು. ಆಹಾರಕ್ಕಾಗಿ, ವಸತಿಗಾಗಿ, ಶಿಕ್ಷಣಕ್ಕಾಗಿ, ಆರೋಗ್ಯ–ಉದ್ಯೋಗ ಹೀಗೆ ಉತ್ತಮ ಜೀವನ ಪರಿಸ್ಥಿತಿಗಳಿಗಾಗಿ ಭಾತೃಭಾವದೊಂದಿಗೆ ಹೋರಾಡಬೇಕಾದ ಜರೂರತ್ತಿರುವ ಜನರನ್ನು ಆಕಡೆ ಯೋಚಿಸಿದಂತೆ ತಡೆಯೊಡ್ಡಿ 'ಜಿಹಾದ್', 'ರಾಮ್‌ರಾಮ್' ಎನ್ನುತ್ತಾ ಒಬ್ಬರನ್ನೊಬ್ಬರು ತಮ್ಮಿಷ್ಟಕ್ಕೆ ತಾವೇ ಕೊಚ್ಚಿಕೊಂಡು ಸಾಯುವಂತೆ ಉತ್ತೇಜಿಸುವುದರ ಹೊರತು ಆ ಮೂಲಕ ಜಾಗತಿಕ ಬಂಡವಾಳಗಾರ ಹಿತಕಾಯುವುದರ ಹೊರತು, 'ಕೋಮುವಾದಿ'ಗಳು ಈವರೆಗೂ ಏನನ್ನು ಸಾಧಿಸಿಲ್ಲ.

೧೯೯೦ರ ದಶಕದಲ್ಲಿ ಭಾರತದಲ್ಲಿ ಆರಂಭವಾದ 'ಕೋಮುವಾದಿ ಸಿದ್ಧಾಂತ' ವೆಂಬುದು ಸಾಮಾನ್ಯ ವ್ಯಕ್ತಿಯ ಸಾಮಾಜಿಕ ಜ್ಞಾನದ ಭಾಗವಾಗಿದೆ. ಇದು ಹರಡಲು ಆರಂಭಿಸಿದ ಸುಳಿಗಳು ಜನ ಸಮೂಹಗಳ ಮನಸ್ಸಿನಲ್ಲಿ ವಿಸೃತವಾಗಿ ಹರಡಿಕೊಂಡಿದೆ.[೧]

ಈ ಮೇಲಿನ ಅಂಶಗಳೆಲ್ಲವೂ ಈ ಮೂರು ನಾಟಕಗಳಲ್ಲಿ ಬಿಂಬಿತವಾಗಿದೆ. ಆದರೆ ಅದರ ಅಭಿವ್ಯಕ್ತಿಯು ಬೇರೆ ಬೇರೆಯಾಗಿದೆ. ನಮ್ಮ ದೇಶಕ್ಕೆ ಸ್ವಾತಂತ್ರ ಬಂದಾಗ ಯಾವ ಪರಿಸ್ಥಿತಿ ಇದ್ದಿತೋ ಈಗಲೂ ಅದೇ ದುಸ್ಥಿತಿಯಿರುವುದನ್ನು ಕಾಣುತ್ತೇವೆ.

ಈ ವಿಚಾರಗಳನ್ನು ನೋಡಿದಾಗ ನಮ್ಮ ದೇಶದಲ್ಲಿ ಇಂದಿಗೂ ನಡೆಯುತ್ತಿರುವ ಕೋಮುವಾದ ಎಷ್ಟರ ಮಟ್ಟಿಗೆ ಸರಿ ಎನ್ನುವುದು? ಇದಕ್ಕಾಗಿ ಜನರು ತಮ್ಮ ಜೀವನವನ್ನು ವಿನಾಶದ ಅಂಚಿಗೆ ತೆಗೆದುಕೊಂಡು ಹೋಗುತ್ತಿದ್ದಾರೆ. ಇದು ಎಷ್ಟರ ಮಟ್ಟಿಗೆ ಸಮರ್ಪಕ? ಎಂಬಿತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಅಗತ್ಯವೆನಿಸುತ್ತಿದೆ.

ಈ ಮೇಲೆ ವಿಚಾರಿಸಿದ ಅಂಶಗಳನ್ನು ಅಧ್ಯಯನ ಮೂಲಕ ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ.

---

೧: 'ಕೋಮುವಾದವನ್ನು ಮಟ್ಟಹಾಕಬೇಕೆಂದರೆ' (ಡಿಸೆಂಬರ್ –೦೪) ಲೇಖನ – ಅಯ್ಯಪ್ಪ ಹೂಗಾರ್.

'ರಾವಿನದಿಯ ದಂಡೆಯಲ್ಲಿ', 'ಜತೆಗಿರುವನು ಚಂದಿರ' ಮತ್ತು 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ಈ ಮೂರು ಕೃತಿಗಳಲ್ಲಿನ ವಸ್ತು ಒಂದೇ ಆಗಿದ್ದರೂ ಅದರ ಧೋರಣೆ ಮತ್ತು ನೋಡುವ ದೃಷ್ಟಿ ಅಭಿವ್ಯಕ್ತಿಗಳಲ್ಲಿ ಸಾಮ್ಯ, ವೈಷಮ್ಯಗಳು ಕಂಡುಬರುವುದರಿಂದ ಈ ನಾಟಕಗಳ ಅಧ್ಯಯನವನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಹಾಗೂ ಈ ಮೂಲಕ ಎಲ್ಲಾ ಅಂಶಗಳನ್ನು ಸ್ಪಷ್ಟಪಡಿಸಲಾಗಿದೆ.

* * *

## ಅಧ್ಯಾಯ – ೨

# 'ರಾವಿನದಿಯ ದಂಡೆಯಲ್ಲಿ'

### (ಲೇಖಕರ ಪರಿಚಯ, ವಸ್ತುವಿನ ಸ್ವರೂಪ ಮತ್ತು ಕಥಾವಿನ್ಯಾಸ)

**ಲೇಖಕರ ಪರಿಚಯ** : 'ರಾವಿನದಿಯ ದಂಡೆಯಲ್ಲಿ' ನಾಟಕವು ಹಿಂದಿ ಲೇಖಕರಾದ ಡಾ. ಅಸಗರ್ ವಜ಼ಾಹತ್ ರವರ 'ಒ ಜನ್ಮಿಯಾ ಹೀ ನಇ' ಎಂಬ ಹಿಂದಿ ನಾಟಕದ ಅನುವಾದವಾಗಿದೆ. ಮೂಲ ನಾಟಕಕಾರರಾದ ಅಸಗರ್ ವಜ಼ಾಹತ್‌ರವರು ಹಿಂದೀ ಸಾಹಿತ್ಯದ ಪ್ರಮುಖ ಲೇಖಕರಲ್ಲಿ ಎದ್ದು ಕಾಣುವ ಧೀಮಂತರು. ಕಥೆ, ಕಾದಂಬರಿ, ನಾಟಕ, ವಿಮರ್ಶೆ ಹೀಗೆ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅವರು ಹೊಸ ಚಿಂತನೆ ಮತ್ತು ಆಯಾಮಗಳನ್ನು ನೀಡಿದ್ದಾರೆ.

ಜುಲೈ ೫, ೧೯೪೬ರಲ್ಲಿ ಉತ್ತರ ಪ್ರದೇಶದ ಫತೇಪುರದಲ್ಲಿ ಜನಿಸಿದ ಅಸಗರ್ ತಮ್ಮೂರಿನಲ್ಲೇ ಶಿಕ್ಷಣ ಪಡೆದರು. ಅನಂತರ ಅಲೀಗಢ ಮುಸ್ಲಿಂ ವಿಶ್ವವಿದ್ಯಾನಿಲಯದಲ್ಲಿ ಎಂ. ಎ., ಪಿ.ಎಚ್.ಡಿ. ಪದವಿ ಪಡೆದರು.

ಇವರ ಮೊದಲ ನಾಟಕ 'ಶಹಂಶಾಹ್ ಬೇತಾಜ್: ಏಕ್ ಗಥಾ' ಇಲ್ಲಿಂದ ಶುರುವಾದ ಇವರ ನಾಟಕ ರಚನಾಯಾತ್ರೆ ಈ ಪ್ರಕಾರವನ್ನು ಸಮೃದ್ಧಗೊಳಿಸಿದೆ. ಫಿರಂಗಿಲೌಟ್ ಆಯೆ, ಇನ್ನಾ ಕೀ ಅವಾಜ್, ವೀರಗತಿ, ಸಮಿಧಾ, ಒ ಜನ್ಮಿಯಾ ಹೀ ನಇ' ಮುಂತಾದ ನಾಟಕಗಳು ದೇಶವನ್ನು ಕಾಡುತ್ತಿರುವ ಸಮಸ್ಯೆಗಳ ಬಗೆಗೆ ಅಸಗರ್ ಅವರ ದೃಷ್ಟಿ ಸ್ನೇಹಸ್ನಿಗ್ಧ ಹಾಗೂ ಮಾನವೀಯವಾಗಿರುವಂತೆಯೇ ವ್ಯವಸ್ಥೆಯ ಕ್ರೂರ ಮುಖಗಳನ್ನು, ಮನುಷ್ಯನ ಪಾಶವೀಯತೆಯನ್ನು ತಟಸ್ಥವಾಗಿ ನಿರೂಪಿಸುತ್ತದೆ.

'ಒ ಜನ್ಮಿಯಾ ಹೀ ನಇ' ನಾಟಕವನ್ನು ಅನುವಾದ ಮಾಡಿದ ಲೇಖಕರಾದ ಡಾ. ತಿಪ್ಪೇಸ್ವಾಮಿ ಯವರ ಪರಿಚಯ ಇಂತಿದೆ.

ಕನ್ನಡ ಮತ್ತು ಹಿಂದೀ ಭಾಷೆಗಳ ನಡುವೆ ಸಮರ್ಥ ಸೇತುವೆಯಂತಿರುವ ಡಾ. ತಿಪ್ಪೇಸ್ವಾಮಿಯವರು 'ರಾವಿನದಿಯ ದಂಡೆಯಲ್ಲಿ' ನಾಟಕವನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಕನ್ನಡ ಮತ್ತು ಹಿಂದಿಭಾಷೆಯಲ್ಲಿ ಕಳೆದ ಮೂವತ್ತೈದು ವರ್ಷಗಳಿಂದ ಬರೆಯುತ್ತ ಬಂದಿರುವ ಅನನ್ಯ ಸಾಧಕ, ಬೋಧಕ ಹಾಗೂ ಸಾಹಿತ್ಯ ಸೇವೆಗೆ ತಮ್ಮನ್ನು ತಾವು ಸಮರ್ಪಿಸಿಕೊಂಡಿರುವಂತಹ ಹೃದಯವಂತ ಚೇತನ ಇವರಾಗಿದ್ದಾರೆ.

ಡಾ. ತಿಪ್ಪೇಸ್ವಾಮಿ ಅವರ ಅಧ್ಯಯನ, ಚಿಂತನೆ ಮತ್ತು ಅಭಿವ್ಯಕ್ತಿಯ ಕ್ಷೇತ್ರಗಳು ವೈವಿಧ್ಯಮಯವಾಗಿದೆ. ಕನ್ನಡ ಮತ್ತು ಹಿಂದಿಯ ಮಧ್ಯೆ ಆದಾನ-ಪ್ರದಾನ ಮಾಡುವ; ಪ್ರಮುಖ ಹಿಂದಿ ಕವಿಗಳನ್ನು ಕನ್ನಡಕ್ಕೆ, ಕನ್ನಡ ಕವಿಗಳನ್ನು ಹಿಂದಿಗೆ ಅತ್ಯುತ್ತಮವಾಗಿ ವಿಡಂಬಿಸುವ; ಸಂದರ್ಶನಗಳ ಮೂಲಕ ತಾವು ಸಂದರ್ಶಿಸಿದ ವ್ಯಕ್ತಿಗಳ

ಅಂತರಂಗ-ಬಹಿರಂಗವನ್ನು ಮನೋಜ್ಞವಾಗಿ ಅನಾವರಣಗೊಳಿಸುವ ಹಾಗೂ ತೌಲನಿಕ ಅಧ್ಯಯನಗಳ ಮೂಲಕ ಕನ್ನಡ – ಹಿಂದಿ ಕವಿಗಳ ಎತ್ತರ-ಬಿತ್ತರಗಳನ್ನು ವಿವೇಚಿಸುವ ಇವರ ಕೃತಿಗಳು ಕನ್ನಡ ಓದುಗರಿಗೆ ಪ್ರಿಯವಾಗಿವೆ.

ಇವರ ಸಾಹಿತ್ಯ ಸಾಧನೆಗೆ ರಾಷ್ಟ್ರ ಹಾಗೂ ರಾಜ್ಯಮಟ್ಟದಲ್ಲಿ ಅಪಾರ ಮನ್ನಣೆ-ಮಾನ್ಯತೆಗಳನ್ನು ಪಡೆದಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಅನುವಾದ ಪುರಸ್ಕಾರ (೧೯೯೫), ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ (೧೯೯೬), ಭಾರತ ಸರ್ಕಾರದ ಹಿಂದೀತರ ಭಾಷೆಯ ಹಿಂದೀ ಲೇಖಕರಿಗೆ ನೀಡುವ ರಾಷ್ಟ್ರೀಯ ಪ್ರಶಸ್ತಿ (೧೯೯೭), ಇವು ಇವರ ಅಗಣಿತ ಸಾಹಿತ್ಯ ಸಾಧನೆಗೆ ಸಂದ ಗೌರವವಾಗಿದೆ.

**"ಅಸಗರ್ ವಜ಼ಾಹಿತ್ ರವರ ನಾಟಕವನ್ನು ಡಾ. ತಿಪ್ಪೇಸ್ವಾಮಿ ಯವರು ತುಂಬ ಆಪ್ತವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಮೂಲದ ಸೊಗಸು, ಬಿಗಿ ಮತ್ತು ಸಂಯಮ ಅನುವಾದದಲ್ಲಿ ಎಲ್ಲೂ ಪಲ್ಲಟವಾಗದಂತೆ ನೋಡಿಕೊಂಡಿದ್ದಾರೆ"**[೧].

**"ನಾಟಕ ಭಾಷಾಂತರವೆಂದು ಅನ್ನಿಸುವುದೇ ಇಲ್ಲ. ಸಂಭಾಷಣೆಗಳಲ್ಲಿ ಎಲ್ಲೂ ಭಾಷೆಯ ಗೊಂದಲವಾಗಲಿ ಸಂಕೀರ್ಣತೆಯಾಗಲಿ ಕಾಣದೆ ಬೇರೆ ಕಾಲ, ಜನ, ಸಂಸ್ಕೃತಿಯ ಪರಿಸರವನ್ನು ಕನ್ನಡದಲ್ಲಿ ಸರಳವಾಗಿ ಸೊಗಸಾಗಿ ಸ್ಪಷ್ಟವಾಗಿ ನಿರೂಪಿಸಿದ್ದು ಎದ್ದು ಕಾಣುತ್ತದೆ"**[೨].

ಮೂಲ ನಾಟಕದಲ್ಲಿರುವಂತೆಯೇ ಈ ನಾಟಕದಲ್ಲೂ ಕೋಮುಸೌಹಾರ್ದತೆಯನ್ನು ಎತ್ತಿಹಿಡಿದಿದ್ದಾರೆ.

ಈ ನಾಟಕ ಎರಡೂ ಜನಾಂಗಗಳ ಮನಸ್ಸನ್ನು ತಿಳಿಗೊಳಿಸಲು ಎಲ್ಲಾ ಕಡೆ ಪ್ರದರ್ಶನವಾಗಬೇಕು. ಯಾಕೆಂದರೆ ಚರಿತ್ರೆಯ ಮುಖ್ಯ ಘಟನೆಯನ್ನು ಅರ್ಥಪೂರ್ಣವಾಗಿ ವಿವರಿಸುತ್ತದೆ ಎಂದು **'ಶೂದ್ರ ಶ್ರೀನಿವಾಸ್ (ಲಂಕೇಶ್ ಪತ್ರಿಕೆ)'** ಅವರು ತಿಳಿಸಿದ್ದಾರೆ.

**ವಸ್ತುವಿನ ಸ್ವರೂಪ :**

'ರಾವಿ ನದಿಯ ದಂಡೆಯಲ್ಲಿ' ನಾಟಕವು ದೇಶ ವಿಭಜನೆಯಾದನಂತರ ದೇಶದ ಪರಿಸ್ಥಿತಿಯನ್ನು ಹೇಳುತ್ತದೆ. ಭಾರತ ಮತ್ತು ಪಾಕಿಸ್ತಾನದ ವಿಭಜನೆಯ ಘಟನೆ ಇಲ್ಲಿನ ಕತೆಗೆ ಹಿನ್ನಲೆಯಾಗಿದೆ. ಒಂದು ದೇಶ ವಿಭಜನೆಯಾಗಿ ಎರಡು ದೇಶಗಳು ಅಸ್ತಿತ್ವಕ್ಕೆ ಬಂದಿತು. ಇಲ್ಲಿನ ಕಥೆ ನಡೆಯುವುದು ಈಗ ಪಾಕಿಸ್ತಾನಕ್ಕೆ ಸೇರಿರುವ ಲಾಹೋರ್ ಪಟ್ಟಣದಲ್ಲಿ. ದೇಶ ವಿಭಜನೆಯಾದಾಗ ಮತಾಂಧ ಶಕ್ತಿಗಳು ಎಲ್ಲೆಲ್ಲೂ ಅಟ್ಟಹಾಸ ಗೈದಿವೆ. ಕೊಲೆ, ಸುಲಿಗೆ, ಹಿಂಸೆಗಳು ಅದೇಷ್ಟೋ. ಪಾಕಿಸ್ತಾನದ ಹಿಂದೂಗಳು ಭಾರತಕ್ಕೆ ವಲಸೆ ಬಂದಿದ್ದಾರೆ, ಭಾರತದ ಮುಸ್ಲಿಂಮರು ಪಾಕಿಸ್ತಾನಕ್ಕೆ ವಲಸೆ ಹೋಗಿದ್ದಾರೆ. ಇದರಿಂದಾಗಿ ತಮ್ಮ ಆಸ್ತಿ-ಪಾಸ್ತಿ, ಮನೆ-ಮಠ,

---

೧: ಲಿಂಗದೇವರು ಹಳೆಮನೆ (ರಾ.ನ.ದ. ಪುಟ-೮೭)

೨: ಕೆ. ರಾಮಮೂರ್ತಿ ರಾವ್ (ಪ್ರಜಾವಾಣಿ) ರಾ.ನ.ದ. (ಪುಟ-೯೨)

ಬಂಧು-ಬಳಗವನ್ನು ಕಳೆದುಕೊಂಡವರೆಷ್ಟೋ ಮಂದಿ. ಇದು ದೇಶ ವಿಭಜನೆಯಾದಾಗ ಇದ್ದಂತಹ ಪರಿಸ್ಥಿತಿಯಾಗಿತ್ತು. ಇದರಿಂದ ಸಾಮಾನ್ಯ ಜನರಿಗೆ ಉಂಟಾದ ಸಮಸ್ಯೆ, ತೊಂದರೆಗಳನ್ನು ಹೇಳುವ ಪ್ರಯತ್ನ ಈ ನಾಟಕದ್ದಾಗಿದೆ. ಕೋಮು ಸೌಹಾರ್ದತೆಯನ್ನು ಈ ನಾಟಕ ಬಿಂಬಿಸುತ್ತದೆಯಾದರೂ, ನಾಟಕ ಅಂತ್ಯ ದುರಂತವನ್ನೇ ಹೇಳುತ್ತದೆ. ಸಮಾಜದ ಕಟ್ಟು-ಪಾಡನ್ನು ಮೀರಿ ಮಾನವೀಯ ನೆಲೆಯಲ್ಲಿ ಮನುಷ್ಯ ಇರಲು ಪ್ರಯತ್ನಿಸಿದರೂ ಅದಕ್ಕೆ ಪ್ರತಿಫಲವೆಂಬಂತೆ ವಿರೋಧವೇ ಎದುರಾಗುತ್ತದೆ. ಇದು ವಾಸ್ತವದ ಪತಿಸ್ಥಿತಿಯೂ ಹೌದು. ದೇಶ ವಿಭಜನೆಯಾದ ನಂತರ ಆದಂತಹ ಬದಲಾವಣೆ, ಅದಕ್ಕೆ ಹೊಂದಿಕೊಳ್ಳಲು ಆದ್ದಂತಹ ಕಷ್ಟ, ಕೋಮುವಾದ, ಈ ಎಲ್ಲವೂ ನಾಟಕದ ವಸ್ತುವಾಗಿದೆ.

ಪ್ರಸ್ತುತ ಸಮಾಜದಲ್ಲೂ ಈ ಕೋಮುವಾದವು ಅತೀ ಹೆಚ್ಚು ಕಂಡುಬರುತ್ತಿದೆ. ವಿದ್ಯಾವಂತ ನಾಗರಿಕರಲ್ಲೂ ಈ ಮತೀಯವಾದವನ್ನು ಬಿತ್ತುತ್ತಿರುವುದು ಕಂಡುಬರುತ್ತಿದೆ. ಸ್ವಾರ್ಥ ರಾಜಕಾರಣಿಗಳಿಂದ ಉಂಟಾದ ಕೋಮುವಾದ ಮತ್ತು ಅದರ ಪರಿಣಾಮವಾಗಿ ಆದದ್ದು ದೇಶವಿಭಜನೆ, ಈಗಲೂ ಅದರ ಕಿಚ್ಚು ಹಿಂದೂ-ಮುಸ್ಲಿಂ ಎಂಬ ಭೇದವನ್ನು ಸೃಷ್ಟಿಮಾಡಿದೆ.

ಇದಲ್ಲದರ ಹೊರತಾಗಿ ಒಂದು ಆದರ್ಶ ಸಮಾಜವನ್ನು ಸೃಷ್ಟಿಮಾಡಬಹುದೆಂಬ ಆದರ್ಶಯುಕ್ತವಾದ ನಾಟಕ ಇದಾಗಿದೆ ಎಂದೂಕೊಂಡರೂ, ಕೊನೆಯಲ್ಲಿ ಆದರ್ಶದ ವಿರುದ್ಧ ವಾಸ್ತವದ ದರ್ಶನವೆಂಬಂತೆ, ಅನಾಗರಿಕ ಕೃತ್ಯವೆಸಗುತ್ತದೆ. ನಾಟಕದ ವಸ್ತುವು ದೇಶದ ಎರಡು ಜನಾಂಗಗಳ ಬಗ್ಗೆ ಕುರಿತದ್ದಾಗಿದೆ. ಧಾರ್ಮಿಕ ಸಹಿಷ್ಣುತೆಯನ್ನೇ ಸಾರಲು ಈ ನಾಟಕವನ್ನು ಬಳಸಿಕೊಂಡಂತಿದೆ.

**ಕಥಾವಿನ್ಯಾಸ:**

'ರಾವಿನದಿಯ ದಂಡೆಯಲ್ಲಿ' ನಾಟಕವು ಹಿಂದಿ ನಾಟಕದ ಅನುವಾದವಾಗಿದೆಯಾದರೂ, ಗಾಢವಾದ ಪ್ರಭಾವವನ್ನು ಬೀರುವಂತಹುದಾಗಿದೆ.

'ದೇಶ ವಿಭಜನೆಯಾದ ನಂತರದ ಪರಿಸ್ಥಿತಿಯನ್ನು ಹೇಳಲು ಈ ನಾಟಕವನ್ನು ಬಳಸಿಕೊಂಡು ಒಂದು ಹೊಸ ಸಮಾಜದ ಕಲ್ಪನೆಯನ್ನು ಇದರಲ್ಲಿ ಹುದುಗಿಸಿಟ್ಟಿದ್ದಾರೆ. ಕೋಮುವಾದದ ಪರಿಣಾಮವಾಗಿ ಆದ್ದದು ದೇಶವಿಭಜನೆ. ಅದರಿಂದ ಆದ್ದಂತಹ ಸಮಸ್ಯೆಗಳು ಬಹಳಷ್ಟು, ಜನರು ಅನುಭವಸಿದಂತಹ ತೊಂದರೆ ಅಪಾರ. ಇದರಿಂದ ಹೊರಬರಲು, ಸಮಾಜದ ಸ್ವಾಸ್ಥ್ಯವನ್ನು ಕಾಪಾಡಲು ಬರವಣಿಗೆ ಒಂದು ಅಸ್ತ್ರವಾಗಿದೆ. ಈ ದೃಷ್ಟಿಯಿಂದ ಈ ನಾಟಕ ವಿಶೇಷವಾಗಿದೆ.

ಡಾ. ತಿಪ್ಪೇಸ್ವಾಮಿಯವರು ಮೂಲ ನಾಟಕದ ಅನುವಾದವನ್ನು ಮಾಡಿದರೂ ಮೂಲಕೃತಿಗೆ ಎಲ್ಲೂ ಲೋಪಬರದಂತೆ ನೋಡಿಕೊಂಡಿದ್ದಾರೆ.

ನಾಟಕವು ಒಟ್ಟು ಹದಿನೇಳು ದೃಶ್ಯಗಳನ್ನು ಒಳಗೊಂಡಿದೆ. ಬಹಳ ಸರಳವಾಗಿ ನಾಟಕವನ್ನು ರಚಿಸಿದ್ದಾರೆ ಮತ್ತು ಕಥೆಯನ್ನು ಅತ್ಯಂತ ಸರಳವಾಗಿಯೇ ಹೇಳಿಕೊಂಡು ಹೋಗಿದ್ದಾರೆ. ಮೊದಲ ದೃಶ್ಯದಿಂದ ಕೊನೆದೃಶ್ಯದ ತನಕ ಅನೇಕ ಪಾತ್ರಗಳು ಬರುತ್ತವೆ. ಬಹುತೇಕ ಪಾತ್ರಗಳು ಮಾನವೀಯ ಸ್ಪರ್ಶದಿಂದ ಕೂಡಿದೆ. ಪೈಲ್ವಾನ್ ಮತ್ತು ಅವನ ಸಂಗಡಿಗರನ್ನು ಹೊರತು ಪಡಿಸಿ.

ನಾಟಕದಲ್ಲಿ ಪ್ರಮುಖವಾಗಿ ಬರುವಂತಹ ಪಾತ್ರಗಳು ಸಿಕಂದರ್ ಮಿರ್ಜಾ ಮತ್ತು ಅವನ ಕುಟುಂಬ ರತನ್‌ತಾಯಿ, ಮೌಲ್ವಿ ಪೈಲ್ವಾನ್, ಕವಿ ನಾಸಿರ್ ಮುಂತಾದವರು. ಇವರ ಸುತ್ತಲೇ ಈಡೀ ನಾಟಕವು ಜರಗುತ್ತದೆ. ಕಥೆಯೂ ಎಳೆ-ಎಳೆಯಾಗಿ ಬಿಚ್ಚಿಕೊಳ್ಳುತ್ತದೆ. ಯಾವುದೇ ರೀತಿಯ ಗೊಂದಲ ಕಾಣುವುದಿಲ್ಲ.

ದೇಶ ವಿಭಜನೆಯಾಗಿ ತಮ್ಮ ಆಸ್ತಿ-ಪಾಸ್ತಿ, ಮನೆ-ಮಠ ಎಲ್ಲವನ್ನು ಕಳೆದುಕೊಂಡು ಲಕ್ನೋದಿಂದ ಲಾಹೋರ್‌ಗೆ ವಲಸೆ ಬಂದಂತಹ ಕುಟುಂಬ ಸಿಕಂದರ್ ಮಿರ್ಜಾ ಅವರದ್ದು. ಅವರ ಹೆಂಡತಿ ಹಮೀದಾ ಬೇಗಂ, ಮಗಳು ತನ್ನೊ, ಮಗ ಜಾವೇದ್, ಪಾಕಿಸ್ತಾನ ಸರ್ಕಾರ ಅಲಾಟ್ ಮಾಡಿದಂತಹ ಮನೆಗೆ ಇವರು ಬರುತ್ತಾರೆ. ಇಲ್ಲಿಂದ ನಾಟಕದ ಪ್ರಾರಂಭ. ಅವರಿಗೆ ರತ್ನಪಡಿ ವ್ಯಾಪಾರಿ ರತನ್ ಲಾಲ್ ಚೌಹಾರಿಯ ೨೨ ರೂಮ್ ಊಳ್ಳ ಬಂಗಲೆ ಸಿಕ್ಕಿರುತ್ತದೆ. ಇದಕ್ಕೆ ಅಲ್ಲಾಗೆ ಕೃತಜ್ಞತೆ ಅರ್ಪಿಸಲು ನಮಾಜ್ ಮಾಡುತ್ತಾರೆ. ಅಲ್ಲಿ ಅನಿರೀಕ್ಷಿತವಾಗಿ ರತನ್ ತಾಯಿ ಇರುತ್ತಾಳೆ. ದಂಗೆಯ ಸಂದರ್ಭದಲ್ಲಿ ಹೊರಗೆ ಹೋದ ಅವಳ ಮಗ, ಸೊಸೆ, ಮೊಮ್ಮಗಳು ಕಾಣೆಯಾಗಿರುತ್ತಾರೆ. ಆಗಿಂದಲೂ ರತನ್‌ತಾಯಿ ಆ ಬಂಗಲೆಯಲ್ಲಿ ಒಬ್ಬಳೇ ಇರುತ್ತಾಳೆ. ಸಿಕಂದರ್ ಮಿರ್ಜಾ ಮತ್ತು ಅವನ ಕುಟುಂಬದವರು ಈ ಬಂಗಲೆ ನಮಗೆ ಅಲಾಟ್ ಮಾಡಿದ್ದಾರೆ ನೀವು ಹಿಂದೂಗಳು ಇಲ್ಲಿರಬಾರದು ಎಂದು ಹೇಳಿದರೂ, 'ನನ್ನ ರತನ್ ಬರೋವರೆಗೆ ನಾನು ಇಲಿರೋಳೆ' ಎಂದು ಹೇಳುತ್ತಾಳೆ. ನಿಮ್ಮ ಮಗ ವಾಪಸ್ ಬರೋದಿಲ್ಲ ಅನ್ನುವ ಹಾಗೆ ಮಾತಾಡಿದರೂ ಅವಳು ಅಲ್ಲಿಂದ ಹೋಗಲು ತಯಾರಿರುವುದಿಲ್ಲ. ರತನ್ ತಾಯಿಗೆ ತಾವು ಪಟ್ಟಿರುವ ಕಷ್ಟವನ್ನಲ್ಲಾ ಹೇಳಿಕೊಳ್ಳುತ್ತಾರೆ. ಅದರಿಂದ ಯಾವ ಪ್ರಭಾವವೂ ಆಗದ ಕಷ್ಟೋಡಿಯನ್‌ಗೆ ದೂರು ಹೇಳಲು ಮಿರ್ಜಾ ಸಾಹೇಬರು ಹೊರಡುತ್ತಾನೆ.

ದೃಶ್ಯ ಎರಡರಲ್ಲಿ – ಮಿರ್ಜಾ ಕಸ್ಟೋಡಿಯನ್ ಆಫೀಸ್‌ಗೆ ರತನ್ ತಾಯಿಯನ್ನು ಬಂಗ್ಲೆಯಿಂದ ಓಡಿಸಿ ಎಂದು ಹೇಳಲು ಬರುತ್ತಾನೆ. ಆದರೆ ಅಲ್ಲಿನ ಕ್ಲರ್ಕ್‌ಗಳೆಲ್ಲಾ ನಿಮಗೆ ಅದೃಷ್ಟ ಇದೆ ಆದ್ದರಿಂದ ಅಷ್ಟು ದೊಡ್ಡ ಬಂಗಲೆ ನಿಮಗೆ ಅಲಾಟ್ ಆಗಿರುವುದು. ಒಬ್ಬ ಮುದುಕಿಯನ್ನು ಓಡಿಸುವುದು ಕಷ್ಟನಾ ಎಂಬಂತೆ ಹಾಸ್ಯ ಮಾಡುತ್ತಾರೆ. ಅವಳನ್ನು ಭಾರತಕ್ಕೆ ಕಳುಹಿಸಿ ಇಲ್ಲವೇ ನಿಮ್ಮ ದೂರಿಗೆ ಆಫೀಸರ್ ಬೇರೆ ಬಂಗ್ಲೆಕೊಡುತ್ತಾರೆ. ಈ ಬಂಗಲೆಯನ್ನು ಅವರಿಗೆ ಆತ್ಮೀಯರಾದ 'ಸಿಂಧಿ'ಯವನಿಗೆ ಕೊಡುತ್ತಾರೆ.

**"ಆ ಮುದುಕಿ ಅಮೃತವನ್ನೇನು ಕುಡಿದಿರಲಾರಳು ಅಲ್ಲವೆ? ಇಡೀ ಬಂಗ್ಲೆ ಮೇಲೆ ನಿಮ್ಮದೇ ಹಕ್ಕಾಗುತ್ತದೆ"**[೧] ಎಂದು ಕ್ಲರ್ಕ್ ಹೇಳುತ್ತಾನೆ. ಇಲ್ಲವೆಂದರೆ ಯಾಕೂಬ್ ಖಾನ್ (ಪೈಲ್ವಾನ್) ಗೆ ಹೇಳಿದರೆ ಕೆಲಸ ಮುಗಿಸುತ್ತಾನೆ

---

೧: ರಾ.ನ.ದ; (ಪುಟ-೧೨)

ಎಂಬ ಸಲಹೆ ಕೊಡುತ್ತಾನೆ (ಬೆರಳನ್ನು ಹೆಲಗ ಮೇಲಿಟ್ಟುಕೊಂಡು ಕತ್ತನ್ನು ಕತ್ತರಿಸುವಂತೆ ಶಬ್ದಮಾಡುತ್ತಾನೆ.). ದೃಶ್ಯ ಮೂರರಲ್ಲಿ ಮಿರ್ಜಾ ಕಸ್ಟೋಡಿಯನ್ ಆಫೀಸ್‌ನಲ್ಲಿ ನಡೆದ ವಿಷಯವನ್ನು ಹೆಂಡತಿ, ಮಕ್ಕಳಿಗೆ ಹೇಳುತ್ತಾನೆ. ಅವಳನ್ನು ಮನೆಯಿಂದ ಹೊರಹಾಕಲು ಉಪಾಯ ಹೂಡುತ್ತಾರೆ.

**'ಪಾಕಿಸ್ತಾನದಲ್ಲಿ ಮುಸ್ಲಿಂರು ಮಾತ್ರ ಇರಬೇಕು, ಹಿಂದೂಗಳು ಇರಬೇಕೆಂದರೆ ಧರ್ಮ ಬದಲಾಯಿಸಿಕೊಳ್ಳಬೇಕೆಂದು'** ಹೇಳಿದರೆ ಅವಳು ಹೆದರಿಕೊಂಡು ಹೋಗಬಹುದೆಂದು ಯೋಚಿಸುತ್ತಾರೆ. ಸಿಕಂದರ್ ಮಿರ್ಜಾ ಮಗಳು ತನ್ನೊ ರತನ್ ತಾಯಿಯನ್ನು 'ಅಜ್ಜಿ' ಎಂದು ಕರೆದಾಗ ಅವಳಲ್ಲಿ ತನ್ನ ಮೊಮ್ಮಗಳನ್ನು ಕಾಣುತ್ತಾಳೆ. ನಿಮಗೆ ಬಂಗಲೆ ಅಲಾಟ್ ಆಗಿದೆ. ನೀವು ಇರಿ ನಾನು ಇರುತ್ತೀನಿ ಎಂದಾಗ ಮನೆಯಲ್ಲಿ ಎಲ್ಲರೂ ಕೋಪಗೊಳ್ಳುತ್ತಾರೆ. ಅಷ್ಟರಲ್ಲಿ ಜಾವೇದ್ ನಾನು ಏನಾದದರೂ ದಾರಿ ಮಾಡುತ್ತೇನೆಂದು ಹೊರಡುತ್ತಾನೆ.

ನಾಲ್ಕನೇ ದೃಶ್ಯದಲ್ಲಿ ಹೊಸ-ಹೊಸ ಪಾತ್ರಗಳ ಆಗಮನ, ಇವರು ಸಮಾಜವನ್ನು ನೋಡುವ ದೃಷ್ಟಿಕೋನವೇ ಬೇರೆ. ದೇಶ ವಿಭಜನೆಯಾದ ಮೇಲೆ ಹಿಂದೂಗಳನ್ನು ಲಾಹೋರ್‌ನಲ್ಲಿ ಉಳಿಯದಂತೆ ಮಾಡಿದ ಕೊಡುಗೆ ಪೈಲ್ವಾನ್, ಅಲೀಂ, ಅನ್ವರ್‌ಗೆ ಸೇರುತ್ತದೆ. ಚಹಾ ಅಂಗಡಿ ಮುಂದೆ ಕೂತು ಇವರ ಚರ್ಚೆ ಯಾರ ಬಂಗಲೆ ಯಾರಿಗೆ ಅಲಾಟ್ ಆಗಿದೆ ಎಂದು ತಿಳಿಯುವುದೇ ಆಗಿತ್ತು. ಚರ್ಚೆಯ ನಡುವೆ ರತನ್ ಚೌಹಾರಿಯ ಮನೆ ಮಿರ್ಜಾ ಕುಟುಂಬಕ್ಕೆ ದೊರೆಯಿತು ಮತ್ತು ಅಲ್ಲಿ ಅವರಿಗೆ ಸಮಸ್ಯೆ ಇದೆ ಎಂದು ತಿಳಿದು ಮಿರ್ಜಾ ಮಗನನ್ನು ಕರೆತರಲು ಹೇಳುತ್ತಾನೆ ಪೈಲ್ವಾನ್. ಅಲ್ಲಿಗೆ ಕವಿ ನಾಸಿರ್‌ನ ಪ್ರವೇಶ. ಅವರ ಪರಿಚಯವನ್ನು ಗಝಲ್ ಮುಖಾಂತರವೇ ಮಾಡಿಕೊಳ್ಳುತ್ತಾರೆ. ಅಂದಿನ ಸ್ಥಿತಿಗತಿಗಳ ಚಿತ್ರಣವನ್ನು ಗಝಲ್ ಮುಖಾಂತರ ಹೇಳಿದರು. ಅಷ್ಟರಲ್ಲಿ ಜಾವೇದ್‌ನ ಆಗಮನ. ಅವನಿಂದ ರತನ್ ತಾಯಿಯ ಬಗ್ಗೆ ಮತ್ತೆ ಮನೆಯ ವಾತಾವರಣದ ಬಗ್ಗೆ ಪರಿಚಯ ಮಾಡಿಕೊಂಡು, ಅವಳನ್ನು ನಿಭಾಯಿಸಲು ನಿಮ್ಮಿಂದ ಆಗುವುದಿಲ್ಲ ನಾವು ಹದ್ದುಬಸ್ತಿಗೆ ತರ್ತೇವೆ.. ಕೆಲಸಕ್ಕೆ ಕಾಸು ಕೊಡಬೇಕಾಗುತ್ತದೆ ಎಂದು ಹೇಳಿ ಕಳುಹಿಸುತ್ತಾನೆ.

ದೃಶ್ಯ ಐದರಲ್ಲಿ ಮನೆ ಹೊರಗೆ ಗಂಡಸರು ಮುದುಕಿಯನ್ನು ಹೊರಹಾಕಲು ಹವಣಿಸುತ್ತಿದ್ದರೆ, ಮನೆಯೊಳಗಿನ ಹೆಂಗಸರು ಅವಳೊಂದಿಗೆ ಸೌಹಾರ್ದತೆಯಿಂದ ನಡೆದು ಕೊಳ್ಳುತ್ತಿದ್ದರು. ಮಿರ್ಜಾ ಪಕ್ಕದ ಮನೆ ಹಿದಾಯಿತ್ ಹುಸೇನ್ ಬೇಗಂ ಬಂದು 'ಇದ್ದಿಲ'ನ್ನು ಸಾಲ ಕೇಳಲು ಬಂದಾಗ **'ಬೇರೆಯವರ ವಸ್ತುಗಳನ್ನು ಸಾಲಕೊಡುವಂಥ ಅಧಿಕಾರ ನಮಗೇನಿದೆ?... ಇದ್ದಿಲು ರತನ್ ತಾಯಿಯದು'**[೧] ಎಂದು ಹೇಳಿ ರತನ್ ತಾಯಿಯ ಅನುಮತಿ ಕೇಳಿದಾಗ ಅದನ್ನೆಲ್ಲಾ ನನ್ನನ್ನು ಕೇಳಬೇಕಾ ಕೊಟ್ಟು ಕಳುಹಿಸು ಎನ್ನುತ್ತಾಳೆ. ಮತ್ತೆ ಲಾಹೋರ್‌ನಲ್ಲಿ ಸಿಗುವ ತರಕಾರಿ ಬಗ್ಗೆ ಮಾತಾಡುತ್ತಾರೆ. ಮುದುಕಿಗೆ ಲಾಹೋರ್‌ನಂತ ಪಟ್ಟಣ ಈ ಜಗತ್ತಿನಲ್ಲಿಲ್ಲ. ಲಾಹೋರ್ ಪಟ್ಟಣವನ್ನು ಹೊಗಳುತ್ತಿರುತ್ತಾಳೆ. ಮನೆಗೆ ಬಂದಂತಹ ಮಿರ್ಜಾ ಮುದುಕಿಯೊಡನೆ ಮಾತಾಡುತ್ತಿದ್ದಂತಹ ಕುಟುಂಬದವರನ್ನು ಕೋಪಗೊಳ್ಳುತ್ತಾನೆ.

---

೧: ರಾ.ನ.ದ. (ಪುಟ-೨೪)

ರತನ್ ತಾಯಿಯನ್ನು ಮುಗಿಸುವ ಕೌರ್ಯಕ್ಕೆ ಕೈಹಾಕಿರುತ್ತಾನೆ ಮಿರ್ಜಾ. ಅದಕ್ಕೆ ಬೇಗಂ ತಡೆ ಒಡ್ಡುತ್ತಾಳೆ.

**"ನಮಗೆ ವಯಸ್ಸಿಗೆ ಬಂದ ಮಕ್ಕಳಿದ್ದಾರೆ. ಇಷ್ಟು ದೊಡ್ಡ ಪಾಪ ಮಾಡೋದು ಬೇಡಾರಿ.."**[೧].

ಎಂದು ತನ್ನ ಮೇಲೆ ಆಣೆ, ಪ್ರಮಾಣಮಾಡಿಸಿಕೊಳ್ಳುತ್ತಾಳೆ. ಅದಕ್ಕೆ ಸೋತು ಮಿರ್ಜಾ ಸುಮ್ಮನಾಗುತ್ತಾನೆಯಾದರೂ ಪೈಲ್ವಾನ್ ಸುಮ್ಮನಿರದೆ ಮಿರ್ಜಾ ಮನೆಗೆ ಬಂದು ಗಲಾಟೆ ಮಾಡುವ ಪ್ರಸಂಗ ದೃಶ್ಯ ಆರರಲ್ಲಿ ಕಂಡುಬರುತ್ತದೆ.

ಪೈಲ್ವಾನ್, ಅನ್ವರ್, ಸಿರಾಜ್, ರಜಾ ಮತ್ತು ಮಹಮದ್ ಶಾಹ್ ಮಿರ್ಜಾ ಮನೆಗೆ ಬಂದು ಮಹಮದ್ ಶಾಹ್‌ನನ್ನು ಪರಿಚಯ ಮಾಡಿಕೊಂಡು ಈ ಬಂಗ್ಲೆಯ ಎರಡನೆ ಮಹಡಿ ಇವರಿಗೆ ಅಲಾಟ್ ಆಗಿದೆ ಎಂದಾಗ ಮಿರ್ಜಾಗೆ ಆಶ್ಚರ್ಯವಾಗುತ್ತದೆ. ಹಿಂದೂವಾದ ರತನ್ ತಾಯಿಯನ್ನು ಓಡಿಸಿ ತಮ್ಮವರೇ ಆದ ಮುಸ್ಲಿಂರನ್ನು ಅಲ್ಲಿ ಇರಿಸಬೇಕೆಂಬ ಹುನ್ನಾರವಾಗಿತ್ತು. ಇದಕ್ಕೆ ವಿರೋಧಿಸಿದ ಮಿರ್ಜಾರಿಗೆ ನಿಮಗೆ ಮುಸಲ್ಮಾನರಿಗಿಂತ ಆ ಹಿಂದೂ ಕಾಫಿರ್ ಹೆಂಗಸೇ ಹೆಚ್ಚು ಎಂದು ಆ ಕಾಫಿರ್ ಹೆಂಗಸೂ ರಾಜಾರೋಷವಾಗಿ ಓಡಾಡುವುದು ನಮಗೆ ಸಹಿಸಲಾಗದೆಂದು ಹೇಳುತ್ತಾರೆ. ಯಾವುದಕ್ಕೂ ಒಪ್ಪದೆ ಮಿರ್ಜಾ ಅವರನ್ನು ಕಳುಹಿಸುತ್ತಾನೆ.

ಪೈಲ್ವಾನ್ ಕಡೆಯವರಿಂದ ರತನ್ ತಾಯಿಗೆ ಏನಾದರೂ ತೊಂದರೆ ಆಗಬಹುದೆಂದು ತಿಳಿದು, ಅವಳಿಗೆ ಈ ವಿಷಯ ತಿಳಿಸದೆ ಅವಳನ್ನು ಸುರಕ್ಷಿತವಾಗಿ ಕಾಪಾಡಬೇಕೆಂದು ಕೊಳ್ಳುತ್ತಾರೆ.

ಮಿರ್ಜಾ ರತನ್ ತಾಯಿಯನ್ನು ಹೊರಹಾಕಲು ಒಪ್ಪದಿದ್ದರಿಂದ ಪೈಲ್ವಾನ್, ಮೌಲ್ವಿ ಬಳಿ ನ್ಯಾಯ ಕೇಳಲು ಹೋಗುತ್ತಾರೆ. ಇದು ಏಳನೆ ದೃಶ್ಯದಲ್ಲಿ ಕಂಡುಬರುತ್ತದೆ.

ರತನ್ ತಾಯಿಯು ಹಿಂದೂವಾಗಿರುವುದೇ ಅಪರಾಧವೆಂಬಂತೆ ಪೈಲ್ವಾನ್ ಸಂಗಡಿಗರು ನೋಡುತ್ತಿರುತ್ತಾರೆ. ಕಾಫಿರ್ ಹೆಂಗಸೊಬ್ಬಳು ಇಲ್ಲಿ ಬಚ್ಚಿಟ್ಟುಕೊಂಡಿದ್ದಾಳೆ. ಅವಳನ್ನು ಭಾರತಕ್ಕೆ ಓಡಿಸಿದರೆ, ಮುಸ್ಲಿಂ ಸೋದರನಿಗೆ ಮನೆ ದೊರೆಯುತ್ತದೆ ಎನ್ನುತ್ತಾನೆ ಪೈಲ್ವಾನ್. ಇದಕ್ಕೆ 'ಮೌಲ್ವಿ' ಇದರಲ್ಲಿ ಯಾವ ತಪ್ಪಿದೆ ಎಂದು **'ನೀವು ನೆಲದ ಮೇಲಿರುವವರ ಬಗ್ಗೆ ಅನುಕಂಪ ತೋರಿದರೆ ಆಕಾಶದ ಮೇಲಿರುವವ ನಿಮ್ಮ ಬಗ್ಗೆ ಅನುಕಂಪ ತೋರುತ್ತಾನೆ'**[೨] ಎಂದು ಅವರ ಮನಸ್ಸಿನಲ್ಲಿರುವ ವಿಕಾರತೆಯನ್ನು ತೆಗೆದು ಹಾಕುವ ಪ್ರಯತ್ನ ಮಾಡುತ್ತಾನೆ. ಆದರೆ ಅದು ಅಸಾಧ್ಯವಾಗುತ್ತದೆ. ಕೊನೆಗೆ ಅವರ ಮನಸ್ಸಿನ ವಿಕಾರತೆಯೇ ದುರಂತಕ್ಕೆ ಎಡೆ ಮಾಡಿಕೊಡುತ್ತದೆ.

ನಾಸಿರ್ ಕವಿಗಳು ಗಝಲ್ ಬರಿಯುವುದೇ ತನ್ನ ಪ್ರಪಂಚವೆಂದು ಹೇಳುತ್ತಾರೆ. ಗಝಲ್‌ಗಳು ಸಾಮಾಜಿಕ ವಿಡಂಬನೆ ಮತ್ತು ಕಟುಸತ್ಯಗಳ ವಿಶ್ಲೇಷಣೆಯಾಗಿದೆ. ಪೈಲ್ವಾನ್ ಮತ್ತಿತ್ತರು ಕೆಲಸಕ್ಕೆ ಬಾರದ್ದನ್ನು ಬರಿತೀರಾ ಪಾಕಿಸ್ತಾನದಲ್ಲಿ ನಾಸ್ತಿಕತೆ ತಾಂಡವವಾಡುತ್ತಿದೆ ಎನ್ನುತ್ತಾರೆ. ಅವರ ಪ್ರಕಾರ ರತನ್ ತಾಯಿ ರಾಜಾರೋಷವಾಗಿ

---

**೧: ರಾ.ನ.ದ. (ಪುಟ-೨೮)**

**೨: ರಾ.ನ.ದ. (ಪುಟ-೩೬)**

ಓಡಾಡಿಕೊಂಡು, ರಾವಿನದಿಗೆ ಹೋಗಿ ಸ್ನಾನ, ಪೂಜೆ ಮಾಡುವುದೆಲ್ಲಾ ನಾಸ್ತಿಕತೆಯಾಗಿದೆ. ನಾಸಿರ್ ಇದನ್ನು ವಿರೋಧ ಮಾಡಿ ರತನ್‌ತಾಯಿಯ ಪರ ಮಾತಾಡುತ್ತಾರೆ. ನಾಸಿರ್ – ಕುರಾನ್‌ನಲ್ಲಿ ಯಹೂದಿ ಮತ್ತು ಕ್ರೈಸ್ತ ಧರ್ಮಗಳ ಉಲ್ಲೇಖವಿದೆ ಎಂದಾಗ ಕ್ರೈಸ್ತ ಧರ್ಮದ ಮಾತು ಬೇರೆ...... ಹಿಂದೂ ಧರ್ಮದ ಮಾತು ಬೇರೆ ಅವಳನ್ನು ಹಿಂದೂಸ್ತಾನಕ್ಕೆ ಯಾಕೆ ಕಳುಹಿಸಬಾರದೆಂದನು. ಇದನ್ನು ವಿರೋಧಿಸಿದ ನಾಸಿರ್‌ನ ಮೇಲೆ ಕೋಪಮಾಡಿಕೊಂಡು ಪೈಲ್ವಾನ್ ಅಲ್ಲಿಂದ ಹೋಗುತ್ತಾನೆ. ನಂತರ ನಾಸಿರ್, ಅಲೀಂ ಮತ್ತು ಹಮೀದ್‌ಗೆ ಧರ್ಮದ ಹೆಸರಿನಲ್ಲಿ ರಕ್ತದ ಕೋಡಿ ಹರಿಸುವುದರಲ್ಲಿ ಯಾವ ಪುರುಷಾರ್ಥವಿದೆ ಎಂದು ಸ್ಪಷ್ಟಪಡಿಸುತ್ತಾನೆ. ಇದೆಲ್ಲವೂ ದೃಶ್ಯ ಎಂಟರಲ್ಲಿ ಕಂಡುಬರುತ್ತದೆ.

ಒಂದು ದೃಶ್ಯದಲ್ಲಿ ಹಿಂದೂ – ಮುಸ್ಲಿಂ ನಡುವಿನ ಕೋಮುವಾದ ಮತ್ತು ಅದಕ್ಕೆ ಪುಷ್ಠಿ ನೀಡುವ ವ್ಯಕ್ತಿಗಳ ಕಂಡುಬಂದರೆ, ಮತ್ತೊಂದು ದೃಶ್ಯದಲ್ಲಿ ಈ ಭೇಧವೇ ಇಲ್ಲದಂತೆ ರತನ್ ತಾಯಿ ಮತ್ತು ಅವರ ಕುಟುಂಬವು ಕಂಡುಬರುತ್ತದೆ. ಕೋಮುವಾದ, ಕೋಮು ಸೌಹಾರ್ದತೆ ಎರಡು ಜೊತೆ–ಜೊತೆಯಲ್ಲಿ ನಡೆದುಕೊಂಡು ಬರುತ್ತದೆ.

ದೃಶ್ಯ ಒಂಭತ್ತರಲ್ಲಿ ರತನ್‌ತಾಯಿ, ಹಿಮೀದಾಬೇಗಂ, ಬೇಗಂ ಹಿದಾಯತ್ ಮತ್ತು ತನ್ನೋ ಲಾಹೋರ್‌ನಲ್ಲಿ ಸಿಗುವ ಪದಾರ್ಥಗಳ ಬಗ್ಗೆ ಮಾತಾಡಿಕೊಳ್ಳುತ್ತಾರೆ. ಅವರ ಮಾತಿನ ಮಧ್ಯೆ ರತನ್ ತಾಯಿಗೆ ಅವರ ಮಗ, ಸೊಸೆ, ಮೊಮ್ಮಗಳು ಬದುಕಿರಬಹುದು ಮುಂದೊಂದು ದಿನ ನಿಮಗೆ ಎದುರಾಗಬಹುದೆಂಬ ಆಶಾದಾಯಕ ಮಾತುಗಳನ್ನಾಡುತ್ತಾರೆ. ಮತ್ತು ರತನ್ ತಾಯಿಯು ಆ ಕೇರಿಯ ಜನಗಳ ಕಷ್ಟಕ್ಕೆ ಸಹಾಯ ಮಾಡುವ ಮತ್ತು ಕಾಯಿಲೆ ಬಿದ್ದವರಿಗೆ ಔಷಧಿ ತಯಾರಿಸಿ ಕೊಡುವ ಅವರ ನಿಸ್ವಾರ್ಥ ಗುಣವನ್ನು ಹೊಗಳುತ್ತಾರೆ. ಸೇವಾಮನೋಭಾವನೆಯಿಂದ ತನ್ನ ದುಃಖವನ್ನು ಆಕೆ ಮರೆಯುತ್ತಿರುವ ಧೋರಣೆ ಎನ್ನಬಹುದು. ಅಷ್ಟರಲ್ಲಿ ರತನ್‌ತಾಯಿ ಮಿರ್ಜಾ ಸಾಹೇಬರ ಒಂದು ಕೋರಿಕೆ ಇಡುತ್ತಾಳೆ. ಅವಳು ಪ್ರತಿಸಾರಿ ಆಚರಿಸುವಂತೆ ಈ ಸಾರಿಯೂ ದೀಪಾವಳಿ ಹಬ್ಬವನ್ನು ಆಚರಿಸಲು ಇಚ್ಛಿಸುತ್ತಾಳೆ. ಇದಕ್ಕೆ ಅವರ ಅಡ್ಡಿ ಏನಾದರೂ ಇದ್ದೀಯಾ ಎಂದು ಕೇಳುತ್ತಾಳೆ. ಅವರು ಸಂತೋಷವಾಗಿ ಒಪ್ಪುತ್ತಾರೆ.

ದೀಪಾವಳಿ ಹಬ್ಬದ ಆಚರಣೆಯು ನಾಟಕದ ಸ್ವರೂಪ ಆಶಯಕ್ಕೆ ಹಿಡಿದ ಕನ್ನಡಿಯಂತೆ ಕಂಡುಬರುತ್ತದೆ. ಇದು ನಾಟಕದಲ್ಲಿ ಪ್ರಮುಖ ಘಟನೆಯಾಗಿದೆ ಏಕೆಂದರೆ ಇಲ್ಲಿಂದ ಮುಂದೆ ನಾಟಕವು ಬೇರೆ ಆಯಾಮವನ್ನೇ ಪಡೆದುಕೊಳ್ಳುತ್ತದೆ.

ಹಿಂದೂವೊಬ್ಬಳು ಪಾಕಿಸ್ತಾನದಲ್ಲಿ ದೀಪಾವಳಿ ಆಚರಿಸಿದ್ದು ಅಲ್ಲಿನ ಕೆಲವು ಮಂದಿಗೆ ಸಹಿಸಲಾಗುವುದಿಲ್ಲ. ಮುಂದಿನ ದುರಂತಕ್ಕೆ ಈ ದೀಪಾವಳಿ ಹಬ್ಬವು ನಾಂದಿಯಾಗುತ್ತದೆ.

ದೃಶ್ಯ ಹತ್ತರಲ್ಲಿ ರತನ್ ತಾಯಿಗೆ ದೀಪಾವಳಿ ಹಬ್ಬದ ಸಂಭ್ರಮ, ಸಂಭ್ರಮದಲ್ಲೂ ಮಗನನ್ನು ನೆನಪುಮಾಡಿಕೊಂಡು ದುಃಖಿಸುತ್ತಾಳೆ. ನಾಟಕದಲ್ಲಿ ಪ್ರಮುಖ ದೃಶ್ಯ ಇದಾಗಿದೆ. ರತನ್ ತಾಯಿ ದೀಪಾವಳಿಯಂದು

ದೀಪಗಳನ್ನು ಹೊತ್ತಿಸುತ್ತಾಳೆ. ಅದಕ್ಕೆ ಮಿರ್ಜಾ ಕುಟುಂಬದವರೆಲ್ಲರೂ ನೆರವಾಗುತ್ತಾರೆ ಮತ್ತು ಅವಳ ಕೊಟ್ಟ ಸಿಹಿಯನ್ನು ಸಂತೋಷದಿಂದ ತಿನ್ನುತ್ತಾರೆ. ನಂತರದ ತನ್ನೊ ಮತ್ತು ಹಮೀದಾ ಬೇಗಂ ಮಾತುಗಳು (ಪಾಕಿಸ್ತಾನ, ಹಿಂದೂಸ್ತಾನ ಎಂದು ಏನಕ್ಕೆ ಆಯಿತು) ನಾಟಕಕಾರರು ಸಮಾಜಕ್ಕೆ ಕೇಳುವಂತಹ ಪ್ರಶ್ನೆಯೇ ಆಗಿದೆ. ದುರಂತವೆಂದರೆ ಆ ಪ್ರಶ್ನೆಗೆ ಉತ್ತರ ಇಂದಿಗೂ ಸಿಕ್ಕಿಲ್ಲ.

ದೃಶ್ಯ ಹನ್ನೊಂದರಲ್ಲಿ ಕವಿ ನಾಸಿರ್‌ನನ್ನು ಕಾಣಲು ಹಿದಾಯತ್ ಹುಸೇನ್ ಬರುತ್ತಾರೆ. ಆಗ ನಾಸಿರ್ ನನ್ನ ಭಾವನೆಗಳನ್ನು, ಕಲ್ಪನೆಗಳನ್ನು ಎರಡೆರಡು ಚರಣಗಳಲ್ಲಿ ಜೋಡಿಸ್ತೀನಿ ನಾನು ಮನಸ್ಸಿನಲ್ಲಿ ಅಚ್ಚುಕಟ್ಟು ಎಂದು ಹೇಳುತ್ತಾರೆ. ನಂತರ ತಮ್ಮ ಒಂದು ಗಜಲ್ ಮುಖಾಂತರ ಸಮಾಜದ ಚಿತ್ರಣ ಕೊಡುತ್ತಾರೆ. **"ಮಂದಿರ, ಮಸೀದಿಗಳೆಲ್ಲ ನಮ್ಮ ಎದೆಯ ಮೂಲೆಯಲ್ಲಿಯೇ ಇವೆ. ಅಂತರಂಗದಲ್ಲೇ ದೇವನಿದ್ದಾನೆ. ಆ ದನಿಯನ್ನು ನಾವು ಕಿವಿಗೊಟ್ಟು ಕೇಳಬೇಕು"** ಎಂದೂ ಹೇಳುತ್ತಾರೆ. ಇದು ನಾಟಕಕಾರರ ಆಶಯದಂತೆ ಕಂಡುಬಂದಿದೆ. ಅದನ್ನು ಕವಿಯ ಮುಖಾಂತರ ಗಜಲ್‌ನಲ್ಲಿ ಹೇಳುವ ತಂತ್ರವನ್ನು ಬಳಸಿಕೊಂಡಿದ್ದಾರೆ. ನಂತರ ರತನ್ ತಾಯಿ ಬಂದು ಅವರಿಬ್ಬರಿಗೂ ದೀಪಾವಳಿಯ ಶುಭಾಶಯ ಹೇಳಿ ಸಿಹಿ ಹಂಚುತ್ತಾಳೆ. ಇದು ಹಿಂದೂ–ಮುಸ್ಲಿಂರ ಸೌಹಾರ್ದತೆಯನ್ನು ಬಿಂಬಿಸುತ್ತದೆ.

ದೃಶ್ಯ ಹನ್ನೆರಡರಲ್ಲಿ ಪೈಲ್ವಾನ್ ಮತ್ತು ಸಂಗಡಿಗರು ನಾಸಿರ್‌ನ ಬಳಿಬಂದು ರತನ್ ತಾಯಿ ದೀಪಾವಳಿ ಹಬ್ಬದ ಆಚರಣೆಯ ಬಗ್ಗೆ ಆಕ್ರೋಶ ವ್ಯಕ್ತ ಪಡಿಸುತ್ತಾನೆ. ಅದಕ್ಕೆ ನಾಸಿರ್ ಸಾಹೇಬರು ಪ್ರತಿಯೊಬ್ಬರಿಗೂ ಅವರ ಧರ್ಮದ ಹಾದೀಲಿ ನಡೀಲಿಕ್ಕೆ ಸಂಪೂರ್ಣ ಹಕ್ಕಿದೆ ಎನ್ನುತ್ತಾರೆ. ಅಷ್ಟರಲ್ಲಿ ಬಂದ ಮಿರ್ಜಾ ಸಾಹೇಬರಿಗೆ ನೀವು ಗೈರ್ ಇಸ್ಲಾಂ ಕೆಲಸಗಳನ್ನು ಮಾಡಿಸ್ತೀರಿ, ನಾವು ಸುಮ್ಮನಿರುವುದಿಲ್ಲವೆಂದು ಹೇಳುತ್ತಾನೆ. ಅಷ್ಟರಲ್ಲಿ ಬಂದ ಮೌಲ್ವಿ ಸಾಹೇಬರು ಪೈಲ್ವಾನ್ ಆಕ್ರೋಶವನ್ನು ತಣ್ಣಗೆ ಮಾಡಲು ಎಲ್ಲರಿಗೂ ತಮ್ಮ–ತಮ್ಮ ದೈವವನ್ನು ಸ್ಮರಿಸುವ ಹಕ್ಕಿದೆ ಎಂದಾಗ ಒಪ್ಪದ ಪೈಲ್ವಾನ್‌ಗೆ ನಿಜವಾದ ಇಸ್ಲಾಂಧರ್ಮ ಹೇಗಿದೆ ಮತ್ತು ಒಬ್ಬ ಇಸ್ಲಾಮಿ ಹೇಗಿರಬೇಕೆಂದು ಹೇಳುತ್ತಾರೆ. ಕುರಾನ್‌ನಲ್ಲಿರುವ ಸತ್ಯಾಂಶವು ಮೌಲ್ವಿಗಳ ಮಾತಿನಿಂದ ಕಂಡುಬರುತ್ತದೆ. ಈ ಮಾತುಗಳು ಹಿಡಿಸದ ಪೈಲ್ವಾನ್ ಮೌಲ್ವಿಯನ್ನೆ ಬೈದುಕೊಂಡು ಹೊರಟು ಹೋಗುತ್ತಾನೆ.

ದೃಶ್ಯ ಹದಿಮೂರರಲ್ಲಿ ಹಿದಾಯತ್ ಮತ್ತು ನಾಸಿರ್‌ರ ಸಂಭಾಷಣೆ ನಡೆಯುತ್ತದೆ. ಶಿಶಿರ ಋತುವಿನಲ್ಲಿ ಮರದಲ್ಲಿ ಎಲೆಗಳು ಉದುರುವಾಗ ನನಗೆ ಬೇಸರವಾಗುತ್ತದೆ. ಎಲೆಗಳ ನೋವಿನಲ್ಲಿ ಭಾಗಿಯಾಗೋಕೆ ಅಂತ ಇಲ್ಲಿ ಬಂದಿದ್ದೀನಿ ಎಂದು ಎಲೆಗಳ ಮಧ್ಯೆ ಕೂತಿದ್ದರು.

ಹಿಂದೂಗಳನ್ನು ನಾಶ ಮಾಡುವುದೇ ಇಸ್ಲಾಂ ಧರ್ಮದ ಉದ್ದೇಶವೆಂದುಕೊಂಡವರು ಕೆಲವರು, ಅದಕ್ಕಾಗಿ ಸಾವು–ನೋವು, ಗಲಭೆ– ಎಲ್ಲದಕ್ಕೂ ಸಿದ್ಧರಾಗಿರುವುದು ಒಂದು ಕಡೆಯಾದರೆ, ಮರದಿಂದ ಎಲೆ ಉದುರುವಾಗ ತಮಗೆ ನೋವಾಗುತ್ತದೆ ಎನ್ನುವ ಕವಿ ಮನಸ್ಸು ಒಂದು ಕಡೆ. ಇದು ಸಮಾಜದಲ್ಲಿರುವ ಭಿನ್ನ ಮನಸ್ಥಿತಿಯನ್ನು ಹೇಳುತ್ತದೆ.

ರತನ್ ತಾಯಿಯು ತನ್ನಿಂದ ಮಿರ್ಜಾ ಕುಟುಂಬದವರಿಗೆ ತೊಂದರೆಯಾಗುತ್ತದೆ. ಇಲ್ಲಿಗೆ ಇಲ್ಲಿನ ಅನ್ನ-ನೀರಿನ ಋಣ ಮುಗೀತು ಅಂತಹೇಳಿ ಹೊರಡುತ್ತಾಳೆ. ನಾಸಿರ್ ಮತ್ತು ಹಿದಾಯಿತ್ ಸಾಹೇಬರ ಪ್ರೀತಿಗೆ ಕಟ್ಟುಬಿದ್ದು, ಎಲ್ಲರ ಪ್ರೀತಿಯ 'ಅಮ್ಮ' ರತನ್ ತಾಯಿ ಅಲ್ಲೇ ಉಳಿಯಲು ನಿರ್ಧಾರ ಮಾಡುತ್ತಾಳೆ.

ರತನ್ ತಾಯಿ ಹಿಂದಿನ ದಿನ ಇಲ್ಲಿಂದ ಹೊರಟು ಹೋಗಲು ತೀರ್ಮಾನಿಸಿದ್ದನ್ನು ಕೇಳಿದ ಮಿರ್ಜಾ ಕುಟುಂಬದವರು ಬೇಸರ ಮಾಡಿಕೊಳ್ಳುವುದು ಹದಿನಾಲ್ಕನೇ ದೃಶ್ಯದಲ್ಲಿ ಕಂಡುಬರುತ್ತದೆ. ರತನ್ ತಾಯಿ ನನ್ನಿಂದ ನಿಮಗೆ ತೊಂದರೆ ಆಗಿದ್ದು ತಿಳಿಯಿತು ಎಂದಾಗ ಜಾವೇದ್ ಇಲ್ಲ ಎನ್ನುತ್ತಾನೆ. ಅಜ್ಜಿಗೆ ಸುಳ್ಳು ಹೇಳಬೇಡಿ ನನಗೆ ಎಲ್ಲವೂ ತಿಳಿದಿದೆ ಎಂದಾಗ, ಮಿರ್ಜಾ ಸಾಹೇಬ ನೀವು ನಿಮ್ಮ ಮಗ, ಸೊಸೆ, ಮೊಮ್ಮಕ್ಕಳ ಜೊತೆ ಇರುವುದು ಕರ್ತವ್ಯವೆಂದು ಹೇಳಿ ಭಾಷೆ ತೆಗೆದುಕೊಳ್ಳುತ್ತಾರೆ. ರತನ್ ತಾಯಿ **"ನಾನು ಎಲ್ಲಿಗೂ ಹೋಗಲ್ಲ, ಎಲ್ಲಿಗೂ ಹೋಗಲ್ಲ, ಇಲ್ಲೇ ಇರ್ತೀನಿ. ಇಲ್ಲೇ ಪ್ರಾಣ ಬಿಡ್ತೀನಿ, ಆಯ್ತ?"**[೧] ಎಂದು ಹೇಳಿ ಉಳಿದುಕೊಳ್ಳುತ್ತಾಳೆ.

ಹದಿನಾಲ್ಕನೇ ದೃಶ್ಯದಲ್ಲಿ ಪ್ರಾಣ ಹೋಗುವ ತನಕ ಇಲ್ಲೇ ಇರುತ್ತೀನಿ ಎಂದ ರತನ್ ತಾಯಿ ಪ್ರಾಣ ಕಳೆದುಕೊಳ್ಳುತ್ತಾರೆ. ಇದನ್ನು ತಿಳಿಸಲು ಜಾವೇದ್, ಅಲೀಂ ಬಳಿಬರುತ್ತಾನೆ. ಎಲ್ಲರಿಗೂ ಈ ವಿಷಯ ಕೇಳಿ ಗಾಬರಿ, ದುಃಖವಾಗುತ್ತದೆ. ಸತ್ತ ರತನ್ ತಾಯಿ ಸಂಸ್ಕಾರ ಮಾಡುವುದು ಹೇಗೆಂದು ಎಲ್ಲರೂ ಯೋಚಿಸುತ್ತಾರೆ. ಹಿಂದೂ ಧರ್ಮದಲ್ಲಿ ಏನೇನು ವಿಧಿ ಮಾಡುತ್ತಾರೆಂದು ಯಾರಿಗೂ ತಿಳಿದಿಲ್ಲ ಕೇಳಲೂ ಅವರ ನೆಂಟರಾಗಲೀ, ಬೇರೆ ಹಿಂದೂಗಳಾಗಲಿ ಯಾರು ಉಳಿದಿಲ್ಲ.

ಅವರ ಉತ್ತರಾದಿಕ್ರಿಯೆಯನ್ನು ಗೌರವಯುತವಾಗಿ ಹಿಂದೂ ಧರ್ಮದ ಪ್ರಕಾರವೇ ಮಡಬೇಕೆಂದು ಮೌಲ್ವಿ ಹೇಳುತ್ತಾರೆ. ಇದನ್ನು ಪೈಲ್ವಾನ್ ವಿರೋಧಿಸಿ ಇದು ಧರ್ಮದ್ರೋಹ ಎನ್ನುತ್ತಾನೆ. ಅದಕ್ಕೆ ಮೌಲ್ವಿ **"ಮಗ, ಕೋಪ ಮತ್ತು ವಿವೇಕ ಯಾವತ್ತೂ ಜೊತೆ ಇರುವುದಿಲ್ಲ"** ಎಂದು ಹೇಳಿ ಸಮಾಧಾನ ಮಾಡುತ್ತಾನೆ. ಪೈಲ್ವಾನ್ ಸುಮ್ಮನಿರದೆ ನಾನು ಹೀಗಾಗೋಕೆ ಬಿಡೋದಿಲ್ಲವೆಂದು ಆವೇಶದಿಂದ ನಿರ್ಗಮಿಸುತ್ತಾನೆ.

ಜಾತಿ, ಧರ್ಮಗಳು ಮುಖ್ಯವಲ್ಲ, ಪ್ರೀತಿಸುವ ಹೃದಯಗಳು ಮುಖ್ಯವೆಂಬಂತೆ ಮುಂದಿನ ಚಿತ್ರಣವಿದೆ.

ದೃಶ್ಯ ಹದಿನಾರರಲ್ಲಿ ರತನ್ ತಾಯಿಯ ಕಳೆಬರಹವನ್ನು ಎಲ್ಲಿ ಅಗ್ನಿಸಂಸ್ಕಾರ ಮಾಡಬೇಕೆಂಬುದೇ ತಿಳಿಯದೆ ಚಿಂತೆ ಪಡುತ್ತಿರುತ್ತಾರೆ. ಮೌಲ್ವಿಗಳು ಅದಕ್ಕೆ ರಾವಿನದಿಯ ದಂಡೆಯಲ್ಲಿ ಮಾಡೋಣವೆನ್ನುತ್ತಾರೆ. ಅಲ್ಲಿದ್ದವರು ಒಬ್ಬೊಬ್ಬರು ತಮಗೆ ಗೊತ್ತಿರುವಂತೆ ಹಿಂದೂ ಧರ್ಮದಲ್ಲಿ ಏನೇನು ಮಾಡುತ್ತಾರೆಂದು ಹೇಳುತ್ತಾರೆ. ನಾಸಿರ್ – ಶವವನ್ನು ಬಟ್ಟೆಯಲ್ಲಿ ಸುತ್ತಿಡುತ್ತಾರೆ ಎಂದರೆ, 'ತಕೀ' – ಶವವನ್ನು ಚಟ್ಟದ ಮೇಲೆ ಇಡುತ್ತಾರೆ, ಮಿರ್ಜಾ ಹೆಣಕ್ಕೆ ಮಾವಿನ ಎಲೆಗಳನ್ನು ಹಾಕುತ್ತಾರೆಂದು, 'ಹಿದಾಯತ್' ಹೆಣವನ್ನು ಮೊದಲು ಸ್ನಾನ ಮಾಡಿಸುತ್ತಾರೆ ಎಂದು ಹೀಗೆ ಎಲ್ಲರೂ ತಮಗೆ ಗೊತ್ತಿರುವಂತೆ ಎಲ್ಲವನ್ನೂ ಸಿದ್ಧಮಾಡಿಕೊಳ್ಳುತ್ತಾರೆ. ಕೊನೆಯದಾಗಿ ಮೌಲ್ವಿಗಳಿಗೆ

---

೧: ರಾನದ. (ಪುಟ–೬೮)

– ಹೆಣದ ಹಿಂದೆ ಹೋಗುವಾಗ 'ರಾಮ್ ನಾಮ್ ಸತ್ಯಹೈ' ಯಹೀತುಮ್ಹಾರಿ ಗತ್ ಹೈ' ಎಂದು ಹೇಳಬೇಕಲ್ಲವೇ ಎಂದಾಗ ಮೌಲ್ವಿಗಳು ಇದಕ್ಕೆ ಸಮ್ಮತಿಸುತ್ತಾರೆ. ಇದೆಲ್ಲವೂ ಹಿಂದೂ–ಮುಸ್ಲಿಂ ಧರ್ಮದ ಸೌಹಾರ್ದತೆಯನ್ನು ಬಿಂಬಿಸುತ್ತದೆ. ಜಾತಿ, ಧರ್ಮಕ್ಕಿಂತ ಮುಖ್ಯ ಮಾನವೀಯತೆ, ಮನುಷ್ಯತ್ವದ ವ್ಯಕ್ತಿತ್ವವೇ ಎಂಬುದು ಇಲ್ಲಿ ಸಾಬೀತಾದ ರೀತಿಯಲ್ಲಿದೆ.

ಮೌಲ್ವಿ ಹಿಂದೂ ಧರ್ಮದ ಪರವಾಗಿ ನಡೆದು ಕೊಂಡಿದ್ದರಿಂದ ಅಥವಾ ಅವರಿಗಿದ್ದ ಧರ್ಮಜ್ಞಾನದ ಮುಖಾಂತರ ಅಜ್ಞಾನವನ್ನು ದೂರಮಾಡಲು ಹೊರಟ್ಟಿದ್ದರಿಂದ ಅವರ ಬದುಕು ದುರಂತಕ್ಕೆ ಎಡೆಯಾಯಿತು. ದೃಶ್ಯ ಹದಿನೇಳರಲ್ಲಿ ಪೈಲ್ವಾನ್ ಮತ್ತು ಅವರ ಸಂಗಡಿಗರೆಲ್ಲರೂ ಮೌಲ್ವಿಗಳು ಮತ್ತು ಇತರ ಮುಸ್ಲಿಂ ಬಾಂಧವರು ಮಾಡಿದ್ದಲ್ಲ ಧರ್ಮದ್ರೋಹದ ಕೆಲಸವೆಂದು ತೀರ್ಮಾನಿಸಿ "ನಮ್ಮ ಶೌರ್ಯತೋರ್ರ್ಸೊ ಟೈಂ ಬರುತ್ತೆ" ಎಂದು ನಿರ್ಗಮಿಸುತ್ತಾರೆ.

ಪೈಲ್ವಾನ್ ಮತ್ತು ಅವರ ಸಂಗಡಿಗರ ಆ ದುರಾಲೋಚನೆಯು ಕೊನೆಯ ದೃಶ್ಯದಲ್ಲಿ ಕೌರ್ಯರೂಪಕ್ಕೆ ಬರುತ್ತದೆ. ಮೌಲ್ವಿಗಳು ರಾತ್ರಿಯ ಸಮಯದಲ್ಲಿ ಕುರಾನ್ ಓದುತ್ತಿರುವಾಗ ಹಿಂದುಗಡೆಯಿಂದ ನಾಲ್ವರು ಮುಖಮುಚ್ಚಿಕೊಂಡು ಬರುತ್ತಾರೆ. ನೀವು ಮುಖ ಮುಚ್ಚಿಕೊಂಡು ಬಂದಿದ್ದಿರ ಭಗವಂತ ಪ್ರಾರ್ಥನೆ ಮಂದಿರದಲ್ಲಿ ಇದರ ಅಗತ್ಯವಿಲ್ಲ. ನಿಮ್ಮ ಮುಖ ನನಗೆ ಕಾಣುತ್ತಿಲ್ಲ ಆದರೆ ಆ ಖುದಾ ನೋಡ್ತಿದ್ದಾನೆ ಎಂದು ಹೇಳುತ್ತಿದ್ದ ಹಾಗೆ ಮೌಲ್ವಿಯ ಬಾಯಿಮುಚ್ಚಿ, ಎದೆ, ಹೊಟ್ಟೆಗೆ ಚೂರಿಯಿಂದ ತಿವಿಯುತ್ತಾರೆ. ಮೌಲ್ವಿಯ ದುರಂತದ ಅಂತ್ಯದೊಂದಿಗೆ ನಾಟಕವೂ ಮುಗಿಯುತ್ತದೆ.

ದೇಶ ವಿಭಜನೆಯ ಸಂದರ್ಭದಲ್ಲಿ ಹಿಂದೂಗಳು ಮುಸ್ಲಿಂರ ಮೇಲೆ ಮಾಡಿದ ದೌರ್ಜನ್ಯ ಮುಸ್ಲಿಂರು ಹಿಂದೂಗಳ ಮೇಲೆ ಮಾಡಿದ ದೌರ್ಜನ್ಯಗಳೆಲ್ಲವೂ ಈ ನಾಟಕದಲ್ಲಿ ಬಿಂಬಿತವಾಗಿದೆ.

ನಾಟಕವು ಸರಳವಾಗಿ ಚಿತ್ರಿಸಿದಂತಹ ಆದರ್ಶವು, ಅಂತ್ಯದಲ್ಲಿ ವಾಸ್ತವಿಕತೆಗೆ ಸೋಲುತ್ತದೆ. ಆದರ್ಶ ಎಂದಿಗೂ ಆದರ್ಶವೇ ಆಗಿರುತ್ತದೆ. ಅದು ವಾಸ್ತವವಾಗಬೇಕಾದರೆ ಸಮಾಜದ ಮನಸ್ಥಿತಿಯು ಬದಲಾಗಬೇಕಾಗುತ್ತದೆ. ಮನಸ್ಥಿತಿಯು ಬದಲಾಗಬೇಕಾದರೆ ಹಿಂದೂ–ಮುಸ್ಲಿಂ ಎಂಬ ಸಂಕುಚಿತ ಮನೋಧರ್ಮ ಬಿಟ್ಟು ಎಲ್ಲರೂ ಸಮಾನವಾಗಿ ಬಾಳಬೇಕೆಂಬ ಆಶಯವನ್ನು ಕವಿ ಈ ನಾಟಕದ ಮುಖಾಂತರ ತಿಳಿಸುವ ಪ್ರಯತ್ನ ಮಾಡಿದ್ದಾರೆ.

* * *

# ಅಧ್ಯಾಯ – ೩

# ‘ಜತೆಗಿರುವನು ಚಂದಿರ’

## (ಲೇಖಕರ ಪರಿಚಯ; ವಸ್ತುವಿನ ಸ್ವರೂಪ ಮತ್ತು ಕಥಾವಿನ್ಯಾಸ.)

**ಲೇಖಕರ ಪರಿಚಯ :**

‘ಜಯಂತ್ ಕಾಯ್ಕಿಣಿ’ – ಇವರು ಜನಿಸಿದ್ದು ೧೯೫೫ರಲ್ಲಿ. ಉತ್ತರ ಕನ್ನಡದ ಗೋಕರ್ಣದಲ್ಲಿ ಜನಿಸಿದರು. ಕುಮುಟಾ, ಧಾರವಾಡಗಳಲ್ಲಿ ಶಿಕ್ಷಣ ಮುಗಿಸಿ ಬಯೋಕೆಮಿಸ್ಟ್ರಿ ಎಂ.ಎಸ್ಸಿ. ಯೊಂದಿಗೆ ೧೯೭೬ರಲ್ಲಿ ಮುಂಬಯಿ ಸೇರಿದ ಜಯಂತ್ ಕಾಯ್ಕಿಣಿ, ಅಲ್ಲಿ ೨೩ ವರ್ಷ ದುಡಿದು, ೨೦೦೦ ರಿಂದ ಈಚೆಗೆ ಬೆಂಗಳೂರಿಗೆ ಬಂದಿದ್ದಾರೆ. ಮುಂಬಯಿಯಲ್ಲಿ ಎರಡು ದಶಕಗಳ ಕಾಲ ಔಷಧಿ ಕಾರ್ಖಾನೆಗಳಲ್ಲಿ ಉದ್ಯೋಗಿಯಾಗಿದ್ದು ನಂತರ ಹೈದರಾಬಾದಿನ ಈಟಿವಿ ಕನ್ನಡ ವಾಹಿನಿಯ ಸಲಹೆಗಾರರೂ ಆಗಿದ್ದ ಇವರು ಬೆಂಗಳೂರಿಗೆ ಬಂದ ನಂತರ ಎರಡು ವರುಷ ‘ಭಾವನಾ’ ಮಾಸಪತ್ರಿಕೆಯನ್ನು ಸಂಪಾದಕರಾಗಿ ರೂಪಿಸುತ್ತಿದ್ದರು. ತಮ್ಮ ‘ಬೊಗಸೆಯಲ್ಲಿ ಮಳೆ’, ‘ಶಬ್ದತೀರ’ಗಳ ಮೂಲಕ ಅಂಕಣಕಾರರೂ ಆದರು. ಕೆಲವು ಚಲನಚಿತ್ರಗಳಿಗೆ ಚಿತ್ರಕಥೆ – ಸಂಭಾಷಣೆಯನ್ನು ಬರೆದಿದ್ದಾರೆ. ಇವರ ಕವನ ಸಂಕಲನಗಳು ‘ರಂಗದೊಂದಿಷ್ಟು ದೂರ’, ‘ಕೋಟಿತೀರ್ಥ, ಶ್ರಾವಣ ಮಧ್ಯಾಹ್ನ, ನೀಲಿಮಳೆ.

ಕಥಾಸಂಕಲನಗಳು – ತೆರದಷ್ಟೇ ಬಾಗಿಲು, ಅಮೃತಬಳ್ಳಿ ಕಷಾಯ, ಗಾಳ, ದಗಡು ಪರಬನ ಅಶ್ವಮೇಧ, ಬಣ್ಣದ ಕಾಲು ಮತ್ತು ತೂಫಾನ್ ಮೇಲ್.

ಇವರು ಮೂರು ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಇತಿ ನಿನ್ನ ಅಮೃತ ಮತ್ತು ಜತೆಗಿರುವನು ಚಂದಿರ, ಸೇವಂತಿ ಪ್ರಸಂಗ, ಹಾಗಾಗಿ ಇವರನ್ನು ನಾಟಕಕಾರರೆಂದೂ ಹೇಳಬಹುದು.

ವಿದ್ಯಾರ್ಥಿಯಾಗಿದ್ದಾಗಲೇ, ೧೯ನೇ ವಯಸ್ಸಿನಲ್ಲೇ ತಮ್ಮ ಪ್ರಥಮ ಕವನ ಸಂಗ್ರಹಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುಸ್ತಕ ಪ್ರಶಸ್ತಿ ಪಡೆದ ನಂತರ ಮತ್ತೆ ಮೂರು ಬಾರಿ ಈ ಪ್ರಶಸ್ತಿಯನ್ನು ತಮ್ಮ ಕಥಾಸಂಕಲನಗಳಿಗೆ ಪಡೆದಿದ್ದಾರೆ. ದಿನಕರ ದೇಸಾಯಿ ಕಾವ್ಯ ಪ್ರಶಸ್ತಿ, ದೆಹಲಿಯ ‘ಕಥಾ’ ಪ್ರಶಸ್ತಿ, ಮತ್ತು ಕರ್ನಾಟಕ ರಾಜ್ಯ ಚಲನಚಿತ್ರ ಅತ್ಯುತ್ತಮ ಸಂಭಾಷಣಾಕಾರ ಪ್ರಶಸ್ತಿಯನ್ನು ಪಡೆದಿದ್ದಾರೆ.

ಕನ್ನಡಕ್ಕೆ ನಾಟಕಗಳ ಪರಿಚಯವಾದ್ದದ್ದೇ ಬಹಳ ತಡವಾಗಿ. ಸಂಸ್ಕೃತದಿಂದ ಬಂದಂತಹ ಗೀತನಾಟಕಗಳೇ ಕನ್ನಡದಲ್ಲೂ ಇದ್ದಂತಹದ್ದು. ಇದು ಜನರಿಗೆ ಮನರಂಜನೆ ಕೊಡುವ ಉದ್ದೇಶದಿಂದ ಸಂಸ್ಕೃತ ನಾಟಕದ ಅನುಕರಣೆಯೇ ಆಗಿತ್ತು.

ಇಡೀ ಪರಂಪರೆಯನ್ನು 'ನವ್ಯ ಸಾಹಿತಿ' ಗಳಾದ ಜಯಂತ್ ಕಾಯ್ಕಿಣಿಯವರೂ ಅನುಸರಿಸಿದ್ದಾರೆ. ನವ್ಯ ಪಂಥದಲ್ಲಿ ಬಳಸುವಂತಹ ತಂತ್ರರೂಪದ ಪ್ರಯತ್ನವೆಂದು ಹೇಳಬಹುದು. ಪರಂಪರೆಯನ್ನು ಅನುಸರಿಸಿ ಅದರೊಂದಿಗೆ ಹೊಸತನ್ನು ಹೇಳುವ ಉದ್ದೇಶ ಅವರದ್ದಾಗಿತ್ತೆಂದು ಕಂಡುಬರುತ್ತದೆ.

**ವಸ್ತುವಿನ ಸ್ವರೂಪ :**

'ಜತೆಗಿರುವನು ಚಂದಿರ' – ಭಾರತ ವಿಭಜನೆಯ ಸಂದರ್ಭದ ಕಥಾವಸ್ತುವನ್ನು ಒಳಗೊಂಡಿರುವ ನಾಟಕ ಇದಾಗಿದೆ. ಇದನ್ನು ಮೂಲ ನಾಟಕದ ರೂಪಾಂತರ ಇಲ್ಲವೆ ಅಳವಡಿಕೆ ಎಂದು ಹೇಳಬಹುದು. ಮೂಲ ನಾಟಕದಲ್ಲಿ 'ಜಾರ್' ದೊರೆಗಳ ಕಾಲದಲ್ಲಿ ರಷ್ಯಾದಲ್ಲಿ, ಉಚ್ಚಾಟಿಸಲ್ಪಟ್ಟ ಅಲ್ಪಸಂಖ್ಯಾತ ಜ್ಯೂ ಕುಟುಂಬವೊಂದರ ಕಥಾನಕವಿದೆ. ಈ ನಾಟಕವನ್ನು ಕಾಯ್ಕಿಣಿಯವರು ದೇಶವಿಭಜನೆಯ ಸಂದರ್ಭಕ್ಕೆ ಹೊಂದಿಸಿ ಬರೆದಿದ್ದಾರೆ.

ಲೇಖಕರೇ ಹೇಳುವಂತೆ – **"ಯುದ್ಧ, ವಿಭಜನೆ, ಅಭಿವೃದ್ಧಿ, ಅಣೆಕಟ್ಟು – ಇತ್ಯಾದಿಗಳ ನೆಪದಲ್ಲಿ ಮನುಷ್ಯನ ಸ್ಥಾನಾಂತರ ಮತ್ತು ಉಚ್ಚಾಟನೆಗಳು ನಡೆದೇ ಇದೆ. ಭಾರತದ ದೇಶಚ್ಛೇದನದ ಸಂದರ್ಭದಲ್ಲಿ ಈ ನಾಟಕ ವಸ್ತುವನ್ನು ಅಳವಡಿಸಲು ಯತ್ನಿಸಿದ್ದೇನೆ. ಛೇದ ಉತ್ತರ ಭಾರತದಲ್ಲಾದರೂ ದಕ್ಷಿಣ ಕರಾವಳಿಯ ಹಳ್ಳಿಯ ಮೇಲಾಗುವ ಅದರ ಗಾಯ ಈ ನಾಟಕದ ವಸ್ತು".**[೧]

ಭಾರತ ವಿಭಜನೆಯಿಂದಾಗಿ ಕೋಮುಗಲಭೆ, ಮತೀಯವಾದ ಎಲ್ಲವೂ ಇಂದಿಗೂ ವಾಸ್ತವದ ಜ್ವಲಂತ ಸಮಸ್ಯೆಯನ್ನು ಈ ನಾಟಕದ ವಸ್ತುವು ಒಳಗೊಂಡಿದೆ. ಉತ್ತರ ಭಾರತದಲ್ಲಿ ವಿಭಜನೆಯ ಚಳುವಳಿಂದಾಗಿ ದಕ್ಷಿಣದ ಒಂದು ಕರಾವಳಿಯ ಕುಗ್ರಾಮದ ಮೇಲೂ ಆಗುವಂತಹ ಪರಿಣಾಮವನ್ನು ಚಿತ್ರಿಸಿದೆ. ಇದರಿಂದಾಗಿ ಹಿಂದೂ–ಮುಸ್ಲಿಂರ ಜನ–ಜೀವನದಲ್ಲಿ ಅಲ್ಲೋಲ–ಕಲ್ಲೋಲ ಉಂಟಾಯಿತು. ಹೊರಗಿನ ಪ್ರಪಂಚದ ಅರಿವೇ ಇಲ್ಲದಂತಹ ಜನರಿಗೆ ಈ ವಿಭಜನೆಯ ಕಾವು ತಟ್ಟಿ ಅವರಲ್ಲಿ ಒಂದಾಗಿದ್ದಂತಹ ಪರಂಪರೆ, ಕಟ್ಟುಪಾಡು ಎಲ್ಲವನ್ನೂ ಬಿಟ್ಟು ತಮ್ಮ ಬದುಕಿನತ್ತ ಸಾಗಲು ಮುಂದಾಗುತ್ತಾರೆ.

ಹಿಂದೂ–ಮುಸ್ಲಿಂರ ಮತ್ತು ದೇಶದ ಸಮಸ್ಯೆ ಎಷ್ಟು ತೀವ್ರವಾಗಿತ್ತೆಂಬುದನ್ನು ಈ ನಾಟಕದಲ್ಲಿ ಅನೇಕ ಸಂಕೇತಗಳ ಮುಖಾಂತರ ತಿಳಿಸಿದ್ದಾರೆ.

**ಕಥಾ ವಿನ್ಯಾಸ :**

**'ಫಿಡ್ಲರ್ ಆನ್ ದ ರೂಫ್'** ಎಂಬ ನಾಟಕದ ರೂಪಾಂತರವಾದ 'ಜತೆಗಿರುವನು ಚಂದಿರ' – ನಾಟಕವು ಭಾರತ ದೇಶದ ವಿಭಜನೆಯ ಸಂದರ್ಭವನ್ನು ಕುರಿತಂತೆ ಮತ್ತು ಅದರಿಂದ ಉಂಟಾದ ಕೋಮುಗಲಭೆಯನ್ನು ಹೇಳುತ್ತದೆ. ನವ್ಯ ಸಾಹಿತಿಗಳಾದ ಕಾಯ್ಕಿಣಿಯವರು ಇದನ್ನು ಹೇಳಲು ಅನೇಕ ಸಂಕೇತಗಳನ್ನು

೧: ಜ.ಚ. (ಜಯಂತ್ ಕಾಯ್ಕಿಣಿ).

ಬಳಸಿಕೊಂಡಿದ್ದಾರೆ. ನಾಟಕವು ನೋಡಲು ಸರಳವಾಗಿದೆ ಎನಿಸಿದರೂ ಮುಂದಿನ ಆಯಾಮಗಳಲ್ಲಿ ಸಂಕೀರ್ಣತೆಯ ರೂಪವನ್ನು ತಾಳಿ ವಾಸ್ತವಿಕ ಜ್ವಲಂತ ಸಮಸ್ಯೆಯನ್ನು ತಿಳಿಸುತ್ತದೆ.

ವಿಭಜನೆಯ ಕಾವು ಒಂದು ಕಾರಾವಳಿಯ ಕುಗ್ರಾಮವನ್ನು ಹೇಗೆ ವ್ಯಾಪಿಸಿದೆ ಮತ್ತೆ ಅದರಿಂದ ಉಂಟಾಗುವ ಪರಿಣಾಮವನ್ನು ಹೇಳಲು ನಾಟಕದಲ್ಲ 'ಬಡೇಮಿಯಾ' ಕುಟುಂಬವನ್ನು ಕೇಂದ್ರವಾಗಿಟ್ಟುಕೊಂಡಿದ್ದಾರೆ. ಈ ಕುಟುಂಬದ ಸುತ್ತಲೇ ಇಡೀ ನಾಟಕವು ಸುತ್ತುತ್ತದೆ. ಇದನ್ನು ಹೇಳಲು ನಾಟಕವನ್ನು ಎರಡು ಅಂಕಗಳಾಗಿ ವಿಭಾಗಿಸಿದ್ದು ಮೊದಲ ಅಂಕವು ಒಂಭತ್ತು ದೃಶ್ಯಗಳನ್ನೊಳಗೊಂಡು, ಎರಡನೇ ಅಂಕವು ಏಳು ದೃಶ್ಯಗಳನ್ನು ಒಳಗೊಂಡಿದೆ.

ಮೊದಲನೇ ಅಂಕದಲ್ಲಿ ನಾಟಕದ ಉದ್ದೇಶ, ಔಚಿತ್ಯ, ಮನಸ್ಥಿತಿ ಎಲ್ಲವನ್ನು ಪ್ರಾಸ್ತವಿಕವು ಒಳಗೊಂಡಿದೆ.

ಇಡೀ ನಾಟಕದಲ್ಲಿ ಬರುವಂತಹ ಪ್ರಮುಖ ಪಾತ್ರಗಳ ಪರಿಚಯ, ಮತ್ತು ಅವರ ಜನ-ಜೀವನ, ಉಡುಗೆ-ತೊಡುಗೆ, ಎಲ್ಲ ಪರಂಪರೆಯಿಂದಲೇ ಪ್ರಾರಂಭ ಮತ್ತು ಅಂತ್ಯ. ಇದು ಅಂದಿನ ಸಮಾಜಸ್ಥಿತಿಯನ್ನು ಹೇಳುವುದರ ಜೊತೆಗೆ ವಿಡಂಬನೆಯ ಸಂಕೇತವೂ ಆಗಿದೆ. ಎಲ್ಲಾ ಪಾತ್ರಗಳ ಸ್ವರೂಪದ ಸ್ಥೂಲ ಪರಿಚಯವಿಲ್ಲಿದೆ. ನಾಟಕವನ್ನು ಓದುವವರ ಅಥವಾ ನೋಡುವವರ ಮನಸ್ಥಿತಿಯನ್ನು ಹಿಡಿದಿಡುವ ಪ್ರಯತ್ನವನ್ನು ಪ್ರಸ್ತಾವನೆಯಲ್ಲಿ ಮಾಡಲಾಗಿದೆ. ಅದು ಹಾಡಿನ ರೂಪದಲ್ಲಿರುವುದು ಒಂದು ವಿಶೇಷವಾಗಿದೆ. ಪ್ರಮುಖ ಪಾತ್ರಗಳಲ್ಲಿ ಬಡೇಮಿಯಾ-ಬಡ ಬೇಕರಿ ಕಾರ್ಮಿಕ, ಅವನ ಹೆಂಡತಿ ಮುನೀರ್ ಜಾನ್, ಆರ್ಷಿಯಾ, ಶಬ್ನಂ, ಸೈರಾ ಎಂಬ ಮೂರು ಹೆಣ್ಣುಮಕ್ಕಳು.

ಒಂದನೇ ದೃಶ್ಯದಲ್ಲಿ ಮುನೀರ್ ಜಾನ್ ಮತ್ತು ಅವಳ ಹೆಣ್ಣುಮಕ್ಕಳು ರಂಜಾನ್ ತಯಾರಿಯಲ್ಲಿರುತ್ತಾರೆ. ಅಗ ಮದುವೆ ಮಾಡಿಸುವ ಚಾಂದ್‌ಬೇಬಿಯ ಆಗಮನ. ಆರ್ಷಿಯಾಳಗೆ ಕಲಾಯಿ ಅಂಗಡಿಯ ಕಲ್ಯಾಭ್ಯಾ ಶಂಶಾದ್‌ನೊಂದಿಗೆ ವಿವಾಹದ ಮಾತುಕತೆ ಆಡಲು ಬಂದಿರುತ್ತಾಳೆ. ಇದನ್ನು ಕೇಳಿ ಮುನೀರ್ ಜಾನ್‌ಗೆ ಸಂತೋಷವಾಗುತ್ತದೆ. ಈ ವಿಚಾರವನ್ನು ಬಡೇಮಿಯಾಗೆ ತಿಳಿಸು ಎಂದು ಹೊರಡುವಳು. ಅವಳನ್ನು ನೋಡಿ ಆರ್ಷಿಯಾ ಮತ್ತು ಶಫಿ (ದರ್ಜಿ) ಇಬ್ಬರಿಗೂ ಆತಂಕವಾಗುತ್ತದೆ. ಕಾರಣ ಅವರಿಬ್ಬರ ನಡುವಿನ ಪ್ರೀತಿಯೇ ಆಗಿರುತ್ತದೆ. ಮೂರು ಜನ ಅಕ್ಕ-ತಂಗಿಯರು ತಮಗೆ ಯಾವರೀತಿ ಗಂಡು ಬೇಕೆಂದು ಚಾಂದ್ ಬೇಬಿಗೆ ತಿಳಿಸುವಂತೆ ಹಾಡನ್ನು ಹೇಳುತ್ತಾರೆ.

ಎರಡನೇ ದೃಶ್ಯದಲ್ಲಿ ದೇಶದ ಸ್ಥಿತಿ-ಗತಿಗಳನ್ನು ಪೇಪರ್‌ನಲ್ಲಿ ಓದಿಹೇಳುವ **'ಯುಸೂಫ'** ಅದನ್ನು ಕೇಳುತ್ತಾ ಕುಳಿತ್ತಿರುವ ಜನರು, ಮಧ್ಯದಲ್ಲಿ ಬಂದವನು **'ಶಕೂರ್'** ಮುಂದೆ ಎಲ್ಲರಿಗೂ 'ಶಕೂರ್ ಮಾಸ್ತರ್' ಆಗುತ್ತಾನೆ. ಏನು ಅರಿಯದ ಮುಗ್ಧ ಜನರಲ್ಲಿ ಹೊಸ ವಿಚಾರವನ್ನು ತಂದವನು. ಹೆಣ್ಣುಮಕ್ಕಳಿಗೆ ಶಿಕ್ಷಣದ ಅರಿವನ್ನು ಮೂಡಿಸಬೇಕೆಂದು ಹೇಳಿದ ವಿಚಾರವಂತ. ಇವನ ವಿಚಾರಕ್ಕೆ ಮಾರುಹೋಗಿ ಬಡೇಮಿಯಾ ತನ್ನಮನೆಯಲ್ಲಿ ಮಕ್ಕಳಿಗೆ ಪಾಠಹೇಳುವ ಮಾಸ್ತರನಾಗಿ ನೇಮಿಸುವನು.

ದೃಶ್ಯ ಮೂರರಲ್ಲಿ ರಂಜಾನ್ ಸಂಭ್ರಮದಲ್ಲಿನ ಮೂವರು ಹೆಣ್ಣುಮಕ್ಕಳು ಚಂದ್ರನ ದರ್ಶನಕ್ಕಾಗಿ ಕಾಯುತ್ತಿರುವಾಗ ಬಡೇಮಿಯಾ 'ಶಕೂರ್'ನನ್ನು ಮನೆಗೆ ಕರೆತಂದು ಪರಿಚಯ ಮಾಡಿಸುತ್ತಾನೆ. ಆರ್ಷಿಯಾ, ಶಫಿಯೊಡನೆ ನಮ್ಮ ಮದುವೆ ಬಗ್ಗೆ ತಂದೆ ಬಳಿ ಮಾತಾಡಲು ಹೇಳುತ್ತಾಳೆ. ಅವನ ಆತಂಕವನ್ನು ಅರಿತು, **"ಎಂಥ ಮೂರು ಕಾಸಿನ ದರ್ಜಿಗೂ ಅವನದೇ ಆದ ಸಂತೋಷದ ಹಕ್ಕಿದೆ"**[೧] ಎಂದು ಆತ್ಮವಿಶ್ವಾಸವನ್ನು ತುಂಬುತ್ತಾಳೆ. ಅನಂತರದಲ್ಲಿ ಎಲ್ಲರೂ ಚಂದ್ರನಲ್ಲಿ ಜೀವನ ಸುಗಮವಾಗಿರಲೆಂದು ಪ್ರಾರ್ಥಿಸುವರು.

ದೃಶ್ಯ ನಾಲ್ಕರಲ್ಲಿ ಬಡೇಮಿಯಾ ಕಲ್ಯಾಭ್ಯಾ ನನ್ನು ಕಾಣಲು ಹೋಗುತ್ತಾನೆ. ಇದು ಬಡೇಮಿಯಾ ತನ್ನ ಕೋಳಿಗಳನ್ನು ಕಲ್ಯಾಭ್ಯಾ ಕೇಳುತ್ತಿದ್ದಾನೆಂದು ತಿಳಿದು ಕೊಂಡು, ನಾನು ಕೊಡುವುದಿಲ್ಲ ಎಂದು ಹೇಳುತ್ತಾನೆ. ಈ ಸಂದರ್ಭದ ಅವರಿಬ್ಬರ ಸಂಭಾಷಣೆಯು ಹಾಸ್ಯಮಯವಾಗಿ ಮೂಡಿಬಂದಿದೆ. ನಂತರ ಮಗಳನ್ನು ಮದುವೆ ಮಾಡಿಕೊಡು ಎಂದು ಕೇಳಿದಾಗ, ತಂದೆಯ ಸಹಜ ಕಾಳಜಿಯಿಂದ ಮಗಳ ಬಗ್ಗೆ ಯೋಚಿಸಿ, ವರದಕ್ಷಿಣೆ ಕೊಡುವಹಾಗಿಲ್ಲ, ವರನಿಗೆ ವಯಸ್ಸು ಹೆಚ್ಚಾದರೇನು ಸುಖವಾಗಿರುತ್ತಾಳೆಂದು ತೀರ್ಮಾನಿಸಿ ಒಪ್ಪಿಕೊಳ್ಳುತ್ತಾನೆ.

ದೃಶ್ಯ ಐದರಲ್ಲಿ ದೇಶದಲ್ಲಿ ನಡೆಯುತ್ತಿದ್ದಂತಹ ವಿಭಜನೆಯ ಕಾವು ಕರಾವಳಿಯ ಹಳ್ಳಿಗೂ ತಟ್ಟಿದೆ ಎಂಬುದರ ಅರಿವು ಮೂಡುತ್ತದೆ. ತಮ್ಮದೇ ಆದಂತಹ ಸಂಭ್ರಮ, ಬಡತನದಲ್ಲೇ ಮುಳುಗಿದ್ದ ಜನರಲ್ಲಿ ಎಚ್ಚರಿಕೆ ಘಂಟೆ ಬಾರಿಸುತ್ತದೆ. ಮಗಳ ಮದುವೆ ನಿಶ್ಚಯವಾಯಿತೆಂಬ ಸಂಭ್ರಮದಲ್ಲಿದ್ದ ಬಡೇಮಿಯಾಗೆ ಕಾನ್‌ಸ್ಟೇಬಲ್ ಬಂದು ಚಳುವಳಿಯ ಪ್ರಭಾವವು ಹಳ್ಳಿಯ ಮೇಲೂ ಆಗುತ್ತಿದೆ ಎಂಬ ಸುದ್ದಿ ಮುಟ್ಟಿಸುತ್ತಾನೆ. ಇದರ ಅರಿವೇ ಇಲ್ಲದಂತೆ ಎಂದಿನಂತೆ ಜನ-ಜೀವನ ಸಾಗುತ್ತಿರುತ್ತದೆ. ಹಾಗೆ ಶಕೂರ್ ಮಾಸ್ತರ್, ಶಬ್ನಂಳಿಗೆ - ಶಿಲಾಯುಗದ ಮಾನವ ಕಾಲಾನಂತರದಲ್ಲಿ ಆಧುನಿಕ ಮಾನವನಾಗಿ ಪರಿವರ್ತನೆಗೊಂಡಂತಹ ವಿಷಯದ ಬಗ್ಗೆ ಪಾಠ ಹೇಳುತ್ತಿರುತ್ತಾನೆ. ಹೊಸವಿಚಾರದ ಜೊತೆಗೆ ಗಂಡು-ಹೆಣ್ಣಿನ ನಡುವಿನ ಅಂತರ ಹೋಗಲಾಡಿಸಬೇಕೆಂದು ಹೇಳುವಾಗಲೇ ಶಬ್ನಂ, ಶಕೂರ್ ಮಾಸ್ತರ್‌ನಿಗೆ ಆಕರ್ಷಿತಳಾಗಿರುತ್ತಾಳೆ.

ಬಡೇಮಿಯಾ ಆರ್ಷಿಯಾ ಮದುವೆ ಕಲ್ಯಾಭ್ಯಾ ನೊಡನೆ ನಿಶ್ಚಯ ಮಾಡಿದೆ ಎಂದಾಗ ಮುನೀರ್ ಜಾನ್‌ನ ಸಂತೋಷಕ್ಕೆ ಪಾರವೇ ಇಲ್ಲ. ಆದರೆ, ಆರ್ಷಿಯಾ ಈ ಮದುವೆಯ ವಿರುದ್ಧವಾಗಿ ನಿಲ್ಲುತ್ತಾಳೆ. ಅವಳ ನೆರವಿಗಾಗಿ ಶಫಿ ಬಂದು ಸಭ್ಯತೆಯಿಂದಲೇ ಬಡೇಮಿಯಾನ ಹತ್ತಿರ ಆರ್ಷಿಯಾಳನ್ನು ಮದುವೆ ಮಾಡಿಕೊಳ್ಳುತ್ತೇನೆಂದು ಅವಳನ್ನು ಸಂತೋಷವಾಗಿ ಇಟ್ಟುಕೊಳ್ಳುತ್ತೇನೆಂದು ಆಶ್ವಾಸನೆ ಕೊಡುತ್ತಾನೆ. ಇದು ಅನಕ್ಷರಸ್ತ, ಹಿಂದುಳಿದ ಹಳ್ಳೀಯಜನರಿಗೆ ಅಸಂಬದ್ಧ ವಿಚಾರವಾಗಿತ್ತು. ಬದಲಾದ ಕಾಲದ ನಿಯಮವನ್ನು ಬಡೇಮಿಯಾ ಒಪ್ಪಿ ಅವರ ಮದುವೆಗೆ ಸಮ್ಮತಿ ನೀಡುತ್ತಾನೆ. ಸಂತೋಷದಲ್ಲಿ ಆರ್ಷಿಯಾ, ಶಫಿ ಎಂಥಾ ವಿಸ್ಮಯವಾಯಿತೆಂದು ಹಾಡನ್ನು ಹೇಳುವುದರೊಂದಿಗೆ ಆರನೇ ದೃಶ್ಯ ಮುಗಿಯುತ್ತದೆ. ಮಕ್ಕಳಿಗೆ ಮಾತುಕೊಟ್ಟ ಬಡೇಮಿಯಾ ಹೆಂಡತಿಗೆ ಹೇಗೆ ಈ ವಿಚಾರವನ್ನು ಹೇಳುವುದು ಎಂದು ಆಲೋಚಿಸಿ ಒಂದು ಉಪಾಯ ಮಾಡುತ್ತಾನೆ. ಇದು ಏಳನೇ ದೃಶ್ಯದಲ್ಲಿ

---

೧: ಜ.ಚ. (ಪು-೨೭)

ರಾತ್ರಿ ಮಲಗಿರುವಾಗ ಕನಸು ಕಂಡವನಂತೆ ಎದ್ದು ಚೀರುತ್ತಾನೆ. ಹೆಂಡತಿಯ ಅಜ್ಜಿ ಆರ್ಷಿಯಾ, (ಅವಳ ಹೆಸರನ್ನೆ ಮಗಳಿಗೆ ಇಟ್ಟಿದ್ದರು.) ಅವಳು ಬಂದು ಮೊಮ್ಮಗಳು ಮದುವೆ ಆಗುತ್ತಿರುವ ದರ್ಜಿ ಒಳ್ಳೆ ಹುಡುಗ ಎಂದಳು ಮತ್ತು ಕಲ್ಯಾಭ್ಯಾಳ ಮೊದಲ ಹೆಂಡತಿ ಸತ್ತು ಸ್ವರ್ಗದಲ್ಲಿರುವಳು ಬಂದು ನನ್ನ ಗಂಡನನ್ನು ಮದುವೆ ಆಗೋದಕ್ಕೆ ಎಷ್ಟು ಧೈರ್ಯ ಎಂದೆಲ್ಲಾ ಹೇಳಿದಳು ಎಂದು ಕಥೆಕಟ್ಟಿ ಹೇಳುತ್ತಾನೆ. ಇದು ತಂತ್ರರೂಪದಲ್ಲಿ ಬಳಕೆಯಾಗಿದರೂ, ಓದುಗರಿಗೆ ಹಾಸ್ಯದ ನಗೆಯು ಮೂಡುತ್ತದೆ. ನಂತರ ಮುನೀರ್‌ಜಾನ್ ಆರ್ಷಿಯಾ ಳನ್ನು 'ಶಫಿ'ಗೆ ಕೊಟ್ಟು ಮದುವೆ ಮಾಡಲು ಒಪ್ಪುತ್ತಾಳೆ. ಬಡೇಮಿಯಾ ಉಪಾಯ ಸಿದ್ಧಿಸುತ್ತದೆ.

ಮುಂದೆ ಉಂಟಾಗ ಬಹುದಾದಂತಹ ದುರಂತವನ್ನು ಸೂಕ್ಷ್ಮರೂಪದಲ್ಲಿ ದೃಶ್ಯ ಎಂಟರಲ್ಲಿ ಗೋಚರಿಸುತ್ತದೆ.

'ಸೈರಾ' ನಾಟಕದಲ್ಲಿ ಬರುವಂತಹ ಪ್ರಮುಖ ಪಾತ್ರವಿದು. ನಾಟಕ ಅಂತ್ಯದಲ್ಲಿನ ಬದಲಾವಣೆಗೆ ಕಾರಣಳಾಗುತ್ತಾಳೆ. ಅನಕ್ಷರಸ್ಥ ಮನೆಯಲ್ಲಿ ಪುಸ್ತಕ ತಂದವಳು ಈ 'ಸೈರಾ'. ಇವಳಿಗೆ ಓದಲು ಪುಸ್ತಕವನ್ನು ತಂದು ಕೊಡುತ್ತಿದ್ದವನು ಪಂಡಿತರ ಮಗನೆಂದು ತಿಳಿದು ಆರ್ಷಿಯಾ– 'ಹುಡುಗಾ, ಅದೂ ಬೇರೆ ಧರ್ಮದವನು' ಎಂದಾಗ **'ಜ್ಞಾನಕ್ಕಿಲ್ಲಿಂದ ಬಂತು ಧರ್ಮ'** ಎಂಬ ದಿಟ್ಟ ಉತ್ತರ ಕೊಡುತ್ತಾಳೆ. ಇಲ್ಲಿಂದ ಮುಂದಕ್ಕೆ ನಾಟಕದ ಆಯಾಮವೇ ಬದಲಾಗುತ್ತದೆ.

ಆರ್ಷಿಯಾ, ಶಫಿಯ ಮದುವೆಯ ದಿನ ಎಲ್ಲರೂ ಸಂಭ್ರಮದಲ್ಲಿರುವ ಸಂದರ್ಭವು ಒಂಭತ್ತನೇ ದೃಶ್ಯದಲ್ಲಿ ಬರುತ್ತದೆ. ಜನರೆಲ್ಲಾ ಉಡುಗೊರೆ ಕೊಡುತ್ತಿದ್ದಾರೆ. ಕಲ್ಯಾಭ್ಯಾ ಮಗಳನ್ನು ಕೊಡಲಿಲ್ಲವೆಂದು ವಾದಕ್ಕೆ ನಿಲ್ಲುತ್ತಾನೆ. ಅವನ ಪರವಾಗಿ ಕೆಲವರು ನಿಂತರೆ ಬಡೇಮಿಯಾ ಪರವಾಗಿ ಕೆಲವರು ನಿಂತು ಮಾತಿಗಿಳಿಯುತ್ತಾರೆ. ಪರಿಸ್ಥಿತಿಯನ್ನು ಸಮತೋಲನಕ್ಕೆ ತರಲು ಶಕೂರ್ ಮಾಸ್ತರ್ ಆರ್ಷಿಯಾ ಪ್ರೀತಿಸಿದ ಶಫಿಯನ್ನು ಎಂದು ಹೇಳುತ್ತಾನೆ. ಸಂಗೀತ ಆರಂಭಿಸಲು ಹೇಳಿ ಮದುವೆಯ ಸಂತೋಷಕ್ಕೆ ಎಲ್ಲರು ನರ್ತಿಸಿ ಎಂದಾಗ ಶಬ್ನಂ, ಬಡೇಮಿಯಾ ಎಲ್ಲರೂ ಸಂತೋಷಕ್ಕಾಗಿ ಕುಣಿಯುತ್ತಾರೆ. ಅಷ್ಟರಲ್ಲಿ ಪೊಲೀಸರ ಆಗಮನದಿಂದ ಪರಿಸ್ಥಿತಿಯು ಹದಗೆಡುತ್ತದೆ. ಹಬ್ಬ, ಮೆರವಣಿಗೆ, ಜಾತ್ರೆ ಎಲ್ಲದರ ಮೇಲೆ ನಿರ್ಬಂಧ ಹೇರಲಾಗಿದ್ದರೂ ಇವರು ಸಂಭ್ರಮಿಸುತ್ತಿದ್ದ ಮದುವೆಯ ಆಚರಣೆಯ ಹಿಂದೆ ಏನೋ ಹುನ್ನಾರವಿದೆ ಎಂದು ಶಂಕಿಸಿ ಎಲ್ಲರನ್ನು ಜಾಗ ಖಾಲಿಮಾಡಿಸುವರು. ಮದುವೆಯ ಸಂಭ್ರಮ ಕರಾಳಮೌನದಲ್ಲಿ ಅಂತ್ಯಗೊಳ್ಳುತ್ತದೆ.

ಇಲ್ಲಿಂದ ಮುಂದೆ ಕರಾವಳಿಯ ಹಳ್ಳಿಯ ಜನ–ಜೀವನದ ಮೇಲೆ ವಿಭಜನೆಯ ತೀವ್ರತೆ ನೇರವಾಗಿಯೇ ಪ್ರಭಾವ ಬೀರುತ್ತದೆ.

ಮುಗ್ಧ ಜನರಂತಿದ್ದ ಕರಾವಳಿಯ ಜೀವನದಲ್ಲಿ ದೇಶವಿಭಜನೆ, ಕ್ರಾಂತಿ ಎಂಬೆಲ್ಲಾ ವಿಷಯಗಳು ಹಾಸು ಹೊಕ್ಕಾಗಿರುವುದು ಕಂಡುಬರುತ್ತದೆ. ಇದಲ್ಲದರ ಮಿಗಿಲಾಗಿ ಅವರ ವೈಯಕ್ತಿಕ ಜೀವನವೇ ಕಂಡುಬರುತ್ತದೆ. ಇರುವ ಬಡತನದಲ್ಲೇ ನೆಮ್ಮದಿಯ ಜೀವನಕ್ಕಾಗಿ ದೇವರಲ್ಲಿ ಪ್ರಾರ್ಥಿಸುತ್ತಾರೆ. ತಾನು, ತಮ್ಮವರು ಸಂತೋಷವಾಗಿರಲೆಂದು ಆಶಿಸುವ ವಾಸ್ತವದ ಚಿತ್ರಣವಿದೆ.

ದೇಶ ವಿಭಜನೆಯ ಸಂದರ್ಭದಲ್ಲಿ ನಡೆಯುತ್ತಿದ್ದಂತಹ ಚಳುವಳಿಯಲ್ಲಿ ಭಾಗಿಯಾಗಲು ಶಕೂರ್ ಮಾಸ್ತರು ರಾಜಧಾನಿಗೆ ತೆರಳಲು ತೀರ್ಮಾನಿಸಿದ್ದಾನೆ. ಶಬ್ನಂಗೆ ದೇಶದ ಪರಿಸ್ಥಿತಿಯ ಬಗ್ಗೆ ತಿಳಿಹೇಳುತ್ತಾನೆ. **"ದೇಶ ವಿಭಜನೆ ಆಗೋದೇ ಹೌದು ಅಂತಾದರೆ ಅದು ಸಮರ್ಪಕವಾಗಿ ಆಗಬೇಕು. ನೋವಿಲ್ಲದೆ ಆಗಬೇಕು"**[೧] ಇದರಿಂದಾಗಿ ನಮ್ಮೆಲ್ಲರ ಮೇಲೆ ಹೊಣೆ ಇದೆ ದೇಶವನ್ನು ಕಾಪಾಡುವುದು ಕರ್ತವ್ಯವೆಂದನು. ಹೊರಡವ ಮುನ್ನ ಶಬ್ನಂಳನ್ನು ಮುಂದೊಂದು ದಿನ ಮದುವೆ ಆಗುತ್ತಿನೆಂದು ಭರವಸೆಕೊಟ್ಟು, ಅದನ್ನು ಬಡೇಮಿಯಾಗೆ ಹೇಳಿ ನಮಗೆ ಆಶೀರ್ವಾದ ಮಾಡಬೇಕೆಂದು ಕೇಳಿದರು. ಇದನ್ನು ಕೇಳಿ ಮನಸ್ಸಿನಲ್ಲದ ಮನಸ್ಸಿನಲ್ಲಿ ಸಮ್ಮತಿಸಿದರೂ, ಹೆಂಡತಿಗೆ ಏನೂ ಹೇಳಬೇಕೆಂಬ ಚಿಂತೆಗೆ ಒಳಗಾಗುತ್ತಾನೆ.

ದೃಶ್ಯ ಎರಡರಲ್ಲಿ ಮುನೀರ್ ಜಾನ್‌ಗೆ ಶಕೂರ್ ಮಾಸ್ತರ್, ಶಬ್ನಂ ಮದುವೆ ಸಮ್ಮತಿ ಕೊಟ್ಟೆ ಎಂದಾಗ ಗಾಬರಿಗೊಂಡ ಹೆಂಡತಿಗೆ ಅವನಿಗೆ ಶ್ರೀಮಂತ ದೊಡ್ಡಪ್ಪ ಇದಾನೇಂತ ಕೇಳ್ದೆ ನನಗೂ ಅವನು ಇಷ್ಟ. ಶಬ್ನಂ ಅವನನ್ನು ಹಚ್ಚಿಕೊಂಡಿದ್ದಾಳೆ ಅದಕ್ಕೆ ಸಮ್ಮತಿ ಕೊಟ್ಟೆ ಎಂದು ಏ ಮುನೀ... ನೀನು.....ಪ್ರೇಮಿಸ್ತೀಯ ನನ್ನ? ಎಂದು ಕೇಳುವನು. ತುಸು ನಾಚಿ, ಸಿಡುಕಿ ಕೊನೆಗೂ ಹೂಂ.... ಹೂ... ಪ್ರೇಮಿಸ್ತೀನಿ ನಿಮ್ಮ ಎಂದಾಗ ಬಡೇಮಿಯಾನ ಮುಖದಲ್ಲಿ ಸಂತೋಷದ ನಗೆ ಮೂಡುತ್ತದೆ.

ನಂತರದ ಭಾಗಗಳಲ್ಲಿ ಕಥೆಯಲ್ಲಿ ಬೇರೆಯ ಆಯಾಮವು ತೆರೆದುಕೊಳ್ಳುತ್ತದೆ. ಮುಂದೆ ನಡೆಯುವಂತಹ ಘಟನೆಯು ಎಲ್ಲರ ಮನಸ್ಸನ್ನು ಇಬ್ಬಾಗ ಮಾಡುತ್ತದೆ. ದೇಶ ಇಬ್ಭಾಗವಾದಂತೆ. ಎಲ್ಲರ ಪರಂಪರೆ, ಆದರ್ಶದ ಬದುಕಿಗೆ ತೆರೆ ಬಿದ್ದು ವಾಸ್ತವದ ದರುಶನವಾಗುತ್ತದೆ.

ದೃಶ್ಯ ಮೂರರಲ್ಲಿ ನಡೆಯುವಂತಹದ್ದು ಇದೇ ಆಗಿದೆ. ಶಕೂರ್ ಮಾಸ್ತರ್‌ನಿಂದ ಶಬ್ನಂಗೆ ಪತ್ರ ಬಂದಿತು. ಅದರಲ್ಲಿ ಅವನನ್ನು ರಾಜಧಾನಿಯಲ್ಲಿ ಸೆರೆ ಹಿಡಿದ್ದಾರೆಂಬ ವಿಷಯವಿತ್ತು. ಇದು ಎಲ್ಲರಿಗೂ ಆಶ್ಚರ್ಯದ ವಿಷಯವಾದರೂ, ಚಳುವಳಿಯ ತೀವ್ರತೆ ಜನರೆಲ್ಲರಿಗೂ ಅರಿವು ಮೂಡಿಸುವಂತೆ ಈ ಪ್ರತ ಸಾಧನವಾಯಿತು. ಪತ್ರ ಓದಿದ ಶಬ್ನಂ ತನ್ನನಾಯಕನಿಗೆ ನೆರವಾಗುತ್ತೇನೆಂದು ಹೇಳಿದಾಗ ಬಡೇಮಿಯಾ ಪಿತೃವಾತ್ಸಲ್ಯತೆಯಿಂದ ನಿರಾಕರಿಸುತ್ತಾನೆ. ತಂದೆಗೆ **'ಅವನೇನೂ ಅಪರಾಧ ಮಾಡ್ತಾ ಇಲ್ಲ ಅಪ್ಪಾ. ತನಗಾಗಿ ಎಂದೂ ಯೋಚಿಸಿದವನೇ ಅಲ್ಲ. ಅವನ ಹೋರಾಟ ಜನತೆಗಾಗಿ'**[೨] ಎಂದು ಅವನನ್ನು ಸಮರ್ಥಿಸಿಕೊಂಡು ಅವನಿಗೆ ನೆರವಾಗುವುದು ನನ್ನ ಕರ್ತವ್ಯ, ಮುಂದೊಂದು ದಿನ ನಾವು ಮದುವೆ ಆಗುತ್ತೇವೆಂದು ತಂದೆಗೆ ಸಮಾಧಾನ ಪಡಿಸಿ ನದಿ ದಾಟಲು ಹೊರಡುತ್ತಾಳೆ. ಬಡೇಮಿಯಾ ಇವಳನ್ನು ಕಾಪಾಡು ಎಂದು ದೇವರಲ್ಲಿ ಪ್ರಾರ್ಥಿಸಿಕೊಳ್ಳುತ್ತಾನೆ. ಇದು ನಾಟಕದ ಎರಡನೆ ಅಂಕದ ನಾಲ್ಕನೇ ದೃಶ್ಯದಲ್ಲಿ ಕಂಡುಬರುತ್ತದೆ.

---

೧: ಜ.ಚ. (ಪು-೫೪)

೨: ಜ.ಚ (ಪು-೯೭೦)

ದೃಶ್ಯ ಐದರಲ್ಲಿ ಓದಲು ಪೇಪರ್ ಇಲ್ಲದೆ ಇರುವುದಕ್ಕೆ ಯಾರದೋ ಪಿತೂರಿ ಎಂದು ಯೂಸುಫ ಮತ್ತು ಇತರ ಜನರು ಮಾತಾಡಿಕೊಳ್ಳುತ್ತಿದ್ದರು. ಅಷ್ಟರಲ್ಲೇ ಆರ್ಷಿಯಾ, ಶಫಿಯ ಮನೆಗೆ ಹೊಸಾ ಆಗಮನವೆಂದು ನೋಡಲು ಎಲ್ಲರೂ ಹೋಗುತ್ತಾರೆ. ಅದು ಶಫಿಯ ಕನಸಿನ ಕೂಸು 'ಹೊಲಿಗೆ ಯಂತ್ರ' ವಾಗಿರುತ್ತದೆ. ಇದೇ ಸಂತೋಷದಲ್ಲಿದ್ದಾಗ ಮುನೀರ್ ಜಾನ್ ಬಂದು ಸೈರಾ ಪಂಡಿತರ ಮಗನೊಡನೆ ಓಡಿಹೋದಳು ಎಂದಾಗ ಬಡೇಮಿಯಾ ಅವಳು ನಮ್ಮ ಪಾಲಿಗೆ ಸತ್ತುಹೋದಳು ಎಂದು ಹೇಳುತ್ತಾನೆ. ಹಿಂದೂ ಹುಡುಗನನ್ನು ಮದುವೆ ಆದ ಕಾರಣದಿಂದಲೇ ಈ ವಿರೋಧವೆಂದು ತಿಳಿದುಬರುತ್ತದೆ. ಮಳೆಗಾಲ ಬಂತು, ಛಾವಣಿ ಆಗಬೇಕು ಎಂದು ಎಲ್ಲರನ್ನು ಕಾರ್ಯಪ್ರವೃತ್ತರನ್ನಾಗಿ ಮಾಡುವ ಕೆಲಸ ಬಡೇಮಿಯಾ ಅಲ್ಲಿ ಮಾಡುತ್ತಾನೆ.

ದೃಶ್ಯ ಆರರಲ್ಲಿ ಬಡೇಮಿಯಾ ಮನೆ ಛಾವಣಿ ಕಾರ್ಯದಲ್ಲಿ ನಿರತನಾಗಿರುತ್ತಾನೆ. ಮುನೀರ್ ಜಾನ್, ಕಲ್ಯಾಭ್ಯಾ ಎಲ್ಲರೂ ಮಾತಾಡುತ್ತಿದ್ದಾರೆ ಯಾರೋ ಕೇರಿಗಳಿಗೆ ಬಂದು ಗಲಾಟೆ ಎಬ್ಬಿಸುತ್ತಿದ್ದಾರೆಂದು. ಪರಿಸ್ಥಿತಿ ಕೈಮೀರಿ ಹೋಗಿದೆ ನಿಮಗೆಲ್ಲಾ ಸ್ವಲ್ಪ ಸಮಯ ಗಡವು ಕೊಡುತ್ತೀನಿ ಮನೆ ಖಾಲಿ ಮಾಡಿಎಂದು ಕಾನ್‌ಸ್ಟೇಬಲ್ ಹೇಳಿದಾಗ ಎಲ್ಲರೂ ಸಹನೆಯನ್ನು ಕಳೆದುಕೊಂಡು ಮಾತಾಡುತ್ತಾರೆ. 'ಸೈರಾ'ಳ ಕೆಲಸದಿಂದ ಆಪತ್ತು ಜಾಸ್ತಿ ಆಗಿದೆ. ತಪ್ಪು ಯಾರದು ಅಲ್ಲಾ, ತಪ್ಪು ಸಮಯದ್ದು ಎಂದು ಕಾನ್‌ಸ್ಟೇಬಲ್ ಉತ್ತರ. ಯೂಸಫ ಹೊಡುತ್ತಾನೆ. ಕಲ್ಯಾಭ್ಯಾ, ಬಡೇಮಿಯಾ ಎಲ್ಲರೂ ಇದನ್ನು ವಿರೋಧಿಸಿದರೂ ಅವರಿಗೆ ಬೇರೆ ದಾರಿ ಇರಲಿಲ್ಲ. ನಮ್ಮ ಮನೆ ಬಿಟ್ಟು ಹೋಗಲಾರದಂತಹ ವಸ್ತುಗಳೇನಿದೆ ಎಂದು ಎಲ್ಲರೂ ಮಾತಾಡಿಕೊಂಡು **'ಇದನ್ನು ಬಿಟ್ಟು ಹೋಗೋಕೋ ಕಷ್ಟಾನಾ"**[೧] ಎಂದು ಸಮಾಧಾನ ಮಾಡಿಕೊಳ್ಳುತ್ತಾರೆ.

ನಾಟಕದ ಅಂತಿಮ ದೃಶ್ಯವು ನಿರ್ಣಾಯಕ ದೃಶ್ಯದಂತೆ ಕಂಡುಬರುತ್ತದೆ. ತಮ್ಮ ಪಾಡಿಗೆ ಏನೂ ಅರಿಯದಂತೆ ಇದ್ದಂತಹ ಕರಾವಳಿಯ ಮುಗ್ಧ ಜನರ ಬದುಕೇ ಅಲ್ಲೋಲ-ಕಲ್ಲೋಲ ಉಂಟಾಯಿತು. ಎಲ್ಲರೂ ಊರು ಬಿಡುವ ತೀರ್ಮಾನ ಮಾಡಿಕೊಂಡು ಹೊರಡುತ್ತಾರೆ. ಆರ್ಷಿಯಾ ತಂದೆ-ತಾಯಿಗೆ 'ಲಾಹೋರ್ ಸೇರ್ಕೊಂಬಿಡಿ ನಂತರ ಅಲ್ಲಿ ಚಾಚಾರ ಮನೆ ಹುಡುಕಿದ್ರಾಯ್ತು ಎಂದು ಹೇಳುತ್ತಾಳೆ. ಆರ್ಷಿಯಾಳ ಹೊಟ್ಟೆಯಲ್ಲಿರುವ ಮಗುವಿನ ಚಿಂತೆ ಮುನೀರ್ ಜಾನ್ ವ್ಯಕ್ತ ಪಡಿಸುತ್ತಾಳೆ. ಚಾಂದ್ ಬೇಬಿ ಬಂದು 'ಹಚ್' ಯಾತ್ರೆಗೆ ಹೋಗುವೆ ಮುಂದೊಂದು ದಿನ ದೇವರಿಗೆ ಇಷ್ಟ ಇದ್ರೆ ..... ಎಲ್ಲಾದ್ರೂ ಸಿಗೋಣ ಎಂದು ಹೊರಡುವಳು. ಮುನೀರ್ ಜಾನ್, ಆರ್ಷಿಯಾಗೆ ಮೊದಲ ಬಾಣಂತನಕ್ಕೆ ನಮ್ಮಲ್ಲಿಗೆ ಬಾ ಎಂದು, ಶಬ್ನಂ ಶಕೂರ್ ಮಾಸ್ತರ್ ಹೇಗಿದ್ದಾರೋ ಎಂಬ ಚಿಂತೆಗೆ ಬಡೇಮಿಯಾ ಸಮಾಧಾನ ಪಡಿಸುತ್ತಾನೆ.

ಸೈರಾಳ ನೆನಪು ಮಾಡಿಕೊಂಡ ಮುನೀರ್ ಜಾನ್‌ಗೆ ಮಾತ್ತೆತ್ತ ಬೇಡಾ ಅವಳದು ಎಂದು ಅವಳನ್ನು ತಡೆಯುತ್ತಾನೆ. ಅಷ್ಟರಲ್ಲಿ ಕಲ್ಯಾಭ್ಯಾ ಬಡೇಮಿಯಾನನ್ನು ಕೊನೆಸಲ ಭೇಟಿಮಾಡಿ ಹೊರಡುತ್ತಾನೆ. ಅಷ್ಟರಲ್ಲಿ ಸೈರಾ ತಂದೆ-ತಾಯಿಯನ್ನು ನೋಡಲು ಬರುತ್ತಾಳೆ. ಅವಳ ಕೊರಳಲ್ಲಿ **'ಮಂಗಳ ಸೂತ್ರ'** ಇರುವುದನ್ನು ಎಲ್ಲರೂ

---

೧: ಜ.ಚ. (ಪು-೯೮).

ಕಾಣುತ್ತಾರೆ. ಬಡೇಮಿಯಾ ಅವಳನ್ನು ಮಾತನಾಡಿಸಲು ತಡೆಯುತ್ತಾನೆ. ಕೊನೆಗೆ ತನ್ನಷ್ಟಕ್ಕೆ ದೇವರು ಒಳ್ಳೆದು ಮಾಡಲಿ ಎಂದು ಹರಸುತ್ತಾನೆ. ಎಲ್ಲರೂ ದೋಣಿಯತ್ತ ಸಾಗಲು ಹೊರಟಾಗ ಮುನೀರ್ ಜಾನ್ ತನ್ನ ಮನೆ ಕಸವನ್ನು ಹಾಗೆ ಬಿಡುವುದಿಲ್ಲ ಎಂದು ಕಸ ಹೊಡೆಯಲು ಪ್ರಾರಂಭಿಸುತ್ತಾಳೆ. ತಮ್ಮ ನಂಬಿಕೆ, ಪರಂಪರೆ, ಕಟ್ಟುಪಾಡಿನೊಳಗೆ ಬದುಕು ಸಾಗಿಸುತ್ತಿದ್ದು, ಒಂದು ಹಂತದಲ್ಲಿ ಅದೆಲ್ಲದಿಕ್ಕಿಂತ ಮೀರಿ ಬದುಕು ಎಂದು ಅನ್ನಿಸಿದಾಗ, ಮನುಷ್ಯ ಎಲ್ಲಾದರೂ ಇರಲಿ ನೆಮ್ಮದಿಯಾಗಿರಬೇಕೆಂದು ಅದರತ್ತ ಸಾಗುತ್ತಾರೆ. ಈ ನಿಲುವಿನಿಂದ ನಾಟಕವು ಮುಕ್ತಾಯವಾಗುತ್ತದೆ.

* * *

## ಅಧ್ಯಾಯ – ೪

# 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ'

(ಲೇಖಕರ ಪರಿಚಯ; ವಸ್ತುವಿನ ಸ್ವರೂಪ ಮತ್ತು ಕಥಾ ವಿನ್ಯಾಸ)

**ಲೇಖಕರ ಪರಿಚಯ :**

ಆಧುನಿಕ ಲೇಖಕರಾದ ಕೆ. ವಿ. ಅಕ್ಷರರವರು ರಂಗಕಲೆಯಲ್ಲಿ ದೆಹಲಿಯ ರಾಷ್ಟ್ರೀಯ ನಾಟಕ ಶಾಲೆ ಮತ್ತು ಇಂಗ್ಲೆಂಡಿನ ಲೀಡ್ಸ್ ವಿಶ್ವವಿದ್ಯಾನಿಲಯದಿಂದ ಪದವಿ ಪಡೆದವರು. ನೀನಾಸಮ್ ರಂಗ ಶಿಕ್ಷಣ ಕೇಂದ್ರದಲ್ಲಿ ಅಧ್ಯಾಪಕರಾಗಿ, ನೀನಾಸಮ್ ತಿರುಗಾಟ ಯೋಜನೆಯಲ್ಲಿ ನಿರ್ದೇಶಕರಾಗಿ ಕೆಲಸ ಮಾಡುತ್ತಿರುವವರು. ಭಾರತದ ರಂಗಭೂಮಿಯನ್ನು ಕುರಿತು ಅಭ್ಯಾಸ ಮಾಡಿದ ಅನುಭವ ಇವರಿಗಿದೆ ಮತ್ತು ಯುರೋಪ್ ಹಾಗೂ ಅಮೇರಿಕಾದ ಆಧುನಿಕ ರಂಗಭೂಮಿಗಳನ್ನು ಪ್ರತ್ಯಕ್ಷವಾಗಿ ಕಂಡವರು. ರಂಗಭೂಮಿಯನ್ನು ಕುರಿತು ಅನೇಕ ಪುಸ್ತಕಗಳನ್ನು ಇವರು ರಚಿಸಿದ್ದಾರೆ. 'ರಂಗ ಪ್ರಪಂಚ', ನಾಟಕ 'ಸಹ್ಯಾದ್ರಿಕಾಂಡ' ಮತ್ತು ರಂಗವಿಮರ್ಶೆ – ಸಮೀಕ್ಷೆಯ ಬರಹಗಳನ್ನೊಳಗೊಂಡ 'ಮಾವಿನ ಮರದಲ್ಲಿ ಬಾಳೆಯ ಹಣ್ಣು' ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಯಿಯ ಪುರಸ್ಕಾರ ದೊರೆತಿದೆ. 'ಎಪಿಕ್ ರಂಗಭೂಮಿ' ಎಂಬ ಪುಸ್ತಕವನ್ನು ಬರೆದಿದ್ದಾರೆ.

ಆಧುನಿಕ ಚಿಂತನೆಯಿಂದ ಕೂಡಿದ ಲೇಖಕರು ಈ ನಾಟಕದಲ್ಲಿ ವಿಶ್ವಮಾನವತೆಯ ತತ್ತ್ವವನ್ನು ಎತ್ತಿಹಿಡಿದಿದ್ದಾರೆ.

**ವಸ್ತುವಿನ ಸ್ವರೂಪ:**

'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ವನ್ನು ಆಧುನಿಕ ಚಿಂತಕರಾದ ಕೆ. ವಿ. ಅಕ್ಷರರವರ ಸ್ವತಂತ್ರ್ಯವಾದ ನಾಟಕ ಇದಾಗಿದೆ. ದೇಶಕ್ಕೆ ಸ್ವಾತಂತ್ರ್ಯ ಬಂದು ಇಷ್ಟು ವರ್ಷಗಳಾದರೂ ಹಿಂದೂ – ಮುಸ್ಲಿಂ ಎಂಬುವ ಕೋಮುವಾದದಿಂದ ಹೊರ ಬಂದಿಲ್ಲ. ವೈಜ್ಞಾನಿಕಯುಗ / ಗಣಕ ಯುಗದಲ್ಲಿ ನಾವಿದ್ದೇವೆ, ಆದರೆ ನಮ್ಮ ಮನಸ್ಸು ಜಾತಿ–ಮತ ಎಂಬ ಅಂಧಕಾರದಲ್ಲೇ ಮುಳುಗಿದೆ. ಜಾತಿ, ಮತ, ಕೋಮುವಾದ ಎಲ್ಲಕ್ಕೂ ಮೀರಿದ ಮನುಷ್ಯಧರ್ಮವನ್ನು ಎತ್ತಿಹಿಡಿದಿಟ್ಟಿದ್ದಾರೆ. ಹಿಂದೂ ಧರ್ಮದಲ್ಲೇ ಇರುವ ಸಂಘರ್ಷ, ಮುಸ್ಲಿಂ ಅಲ್ಪಸಂಖ್ಯಾತರ ಮೇಲಿನ ಪೂರ್ವಗ್ರಹ ಮನಸ್ಸು ಇದೆಲ್ಲದರಿಂದ ಹೊರ ಬಂದು ಆಧುನಿಕ ಸಮಾಜ ನಿರ್ಮಾಣವಾಗ ಬೇಕೆಂಬ ಆಶಯ ವ್ಯಕ್ತವಾಗುತ್ತದೆ. ವಿಶ್ವಮಾನವ ತತ್ತ್ವವನ್ನು ಎತ್ತಿಹಿಡಿಯುವ ಪ್ರಯತ್ನ ಈ ನಾಟಕದಲ್ಲಿ ಕಂಡುಬರುತ್ತದೆ.

**ಕಥಾವಸ್ತು:**

'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' – ಈ ನಾಟಕವು ೧೧ ದೃಶ್ಯಗಳಿಂದ ಕೂಡಿದ್ದು, ಒಂದೊಂದು ದೃಶ್ಯಕ್ಕೂ ಒಂದೊಂದು ಹೆಸರನ್ನು ಕೊಟ್ಟು ಆ ದೃಶ್ಯದಲ್ಲಿ ಏನಾಗುತ್ತದೆ ಎಂಬ ಸೂಚನೆಯನ್ನು ಶೀರ್ಷಿಕೆಯಲ್ಲೇ ನಾಟಕಕಾರರು ಹೇಳುಲು ಪ್ರಯತ್ನಿಸಿದ್ದಾರೆ.

ನಾಟಕದಲ್ಲಿ ಮುಖ್ಯವಾಗಿ ಬರುವ ಪಾತ್ರಗಳೆಂದರೆ ಶ್ಯಾಮಭಟ್ ನಿವೃತ್ತ ನ್ಯಾಯಧೀಶರು. ಅವರ ಹೆಂಡತಿ ಸೀತಮ್ಮ. ಇವರ ಮಗಳು ಮಂದಾಕಿನಿ. ಮಗ ಅನಂತ (ಚಿಕ್ಕವಯಸ್ಸಿನಲ್ಲಿಯೇ ಮನೆ ಬಿಟ್ಟು ಓಡಿಹೋಗಿರುತ್ತಾನೆ.), ಇವನಿಂದಲೇ ನಾಟಕವು ಹೊಸ ರೂಪವನ್ನು ಪಡೆದುಕೊಳ್ಳುತ್ತದೆ. ಅನ್ವರ್ ಒಬ್ಬ ಮುಸ್ಲಿಂ ಹುಡುಗ 'ಅನಂತ' ಎಂದು ಹೇಳಿ ಶ್ಯಾಮಭಟ್ಟರ ಮನೆ ಸೇರುತ್ತಾನೆ.

ಮಹಾಬಲ ಶ್ಯಾಮಭಟ್ಟರ ದೂರದ ಸಂಬಂಧಿ. ಹಿಂದೂ ಧರ್ಮದ ಬಗ್ಗೆ ಪೂರ್ವಗ್ರಹ ಮನಸ್ಸುಳ್ಳವನು. ಆರ್.ಎಸ್.ಎಸ್. (ರಾಷ್ಟ್ರೀಯ ಸೇವಾ ಸಂಘ) ಸಂಘದ ಪ್ರತಿ ನಿಧಿಯಂತೆ ಕಂಡುಬರುತ್ತಾನೆ.

ಭಿಕ್ಷುಕ / ಅನಂತ – ಭಿಕ್ಷುಕನ ವೇಷದಲ್ಲಿ ಅನಂತ ಬಂದು 'ಅನ್ವರ್'ನನ್ನು ಅನಂತನನ್ನಾಗಿ ಪರಿವರ್ತಿಸುತ್ತಾನೆ. ಇವೆಲ್ಲವೂ ನಾಟಕದಲ್ಲಿ ಬರುವಂತಹ ಬಹುಮುಖ್ಯಪಾತ್ರಗಳು. ಈ ಪಾತ್ರಗಳಿಗೆ ಪೋಷಕ ಪಾತ್ರಗಳೆಂಬಂತೆ ಭವಾನಮ್ಮ ಶ್ಯಾಮಭಟ್ಟರ ಚಿಕ್ಕಮ್ಮ, ಅರ್ಚಕರಾದ ಚಕ್ರಪಾಣಿ ಶಾಸ್ತ್ರಿ ಮತ್ತು ಡ್ರೈವರ್ ಆಗಿದ್ದ 'ಕುಟ್ಟಿ' ಇವೆರೆಲ್ಲಾ ಕಂಡುಬರುತ್ತಾರೆ.

ಅನ್ವರ್‌ನನ್ನು ಹುಡುಕಿಕೊಂಡು ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ಪೇದೆ ಬರುತ್ತಾರೆ.

ನಾಟಕವು **'ತೆಂಕಣಗಾಳಿ'** ಶೀರ್ಷಿಕೆಯಡಿಯಲ್ಲಿ ಪ್ರಾರಂಭವಾಗುತ್ತದೆ. ಭಿಕ್ಷುಕನ ವೇಷದಲ್ಲಿರುವ ಅನಂತನು ಹಾಡು ಹೇಳುತ್ತಿರುತ್ತಾನೆ. ಈ ಹಾಡಿನ ಮುಖಾಂತರ ಸಮಾಜದಲ್ಲಿ ಆಗುವ ಬದಲಾವಣೆಯನ್ನು ಸೂಕ್ಷ್ಮವಾಗಿ ಗುರುತಿಸಬಹುದು. ಅಷ್ಟರಲ್ಲಿ ಒಂದು ಗುಂಪು ಮಾರಕಾಸ್ತ್ರಗಳೊಂದಿಗೆ ಯಾರನ್ನೋ ಹುಡುಕಿಕೊಂಡು ಬರುತ್ತಾರೆ. ಇನ್ನೊಂದು ಬದಿಯಿಂದ ಪೊಲೀಸ್ ಇನ್ಸ್‌ಪೆಕ್ಟರ್ ಹುಡುಕಿಕೊಂಡು ಬರುತ್ತಾರೆ. ಅವನೇ ಅನ್ವರ್, ಮುಸ್ಲಿಂ ಯುವಕ. ಹಿಂದೂ ಹುಡುಗಿಯಾದ 'ಪ್ರೀತಿ'ಯನ್ನು ಓಡಿಸಿಕೊಂಡು ಹೋಗಿದ್ದರಿಂದ ಸಿಟ್ಟಿಗೆದ್ದ ಜನರು ಪ್ರೀತಿಯನ್ನು ಕೊಂದು, ಅನ್ವರ್‌ನನ್ನು ಕೊಲ್ಲಲ್ಲು ಅವನನ್ನು ಹುಡುಕುತ್ತಿರುತ್ತಾರೆ. ಪೊಲೀಸರೂ ಅನ್ವರ್ ನನ್ನ ಹುಡುಕುತ್ತಿರುತ್ತಾರೆ. ಹೀಗೆ ಹುಡುಕಿಕೊಂಡು ಬಂದ ಪೊಲೀಸರು ಆ ಊರಿಗೆ ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ ಎಂಬ ಹೆಸರು ಯಾಕೆ ಬಂದಿತು ಎಂಬುದನ್ನು ಹೇಳುತ್ತಾರೆ. ಮತ್ತು ಆ ಊರಿನಲ್ಲಿ ನಡೆಯುವ ಶಂಭುಲಿಂಗನ ಜಾತ್ರೆಯ ಬಗ್ಗೆಯೂ ಮಾತಾಡುತ್ತಾರೆ. ಅನ್ವರ್ ಸಿಗದ ಕಾರಣ ಪೊಲೀಸರು ಹೊರಟುಹೋಗುತ್ತಾರೆ. ಆಗ ಭಿಕ್ಷುಕ ಮಾತಾಡುತ್ತಾನೆ.

**'ಬಾ ಹೊರಗೆ' ಅವರೆಲ್ಲಾ ಹೋದರು. ಇನ್ನು ಯಾರು ಬರೋ ಹಂಗೆ ಕಾಣೆ'**[೧]

---

೧: ಚೂ.ಅ.ಕ. (ಪುಟ–೧೧)

ಆಗ ಕಸದ ತೊಟ್ಟಿಯಿಂದ ಅನ್ವರ್ ಎದ್ದು ಬರುತ್ತಾನೆ. ಅವನ ಪ್ರಾಣ ಉಳಿಸಲು ಭಿಕ್ಷುಕ / ಅನಂತ ಕಸದ ತೊಟ್ಟಿಯಲ್ಲಿ ಅಡಗಿಸಿಟ್ಟಿರುತ್ತಾನೆ. ಅನಂತರ ಅನ್ವರ್‌ನನ್ನು ರಕ್ಷಿಸಲು ಶ್ಯಾಮಭಟ್ಟರ ಮನೆಗೆ ಹೋಗಲು ತಿಳಿಸುತ್ತಾನೆ. ತಾನು ಯಾರು ಎಂದು ಯಾರಿಗೂ ಹೇಳದೆ, ಮುಂದೆ ಗೊತ್ತಾಗುತ್ತದೆ ಅಂದಷ್ಟೇ ಹೇಳಿ ಹೋಗುತ್ತಾನೆ.

ಎರಡನೇ ದೃಶ್ಯವು **'ಇಲ್ಲಿರುವುದು ನಮ್ಮ ಮನೆ.....'** ಎಂಬ ಶೀರ್ಷಿಕೆ ಯಿಂದ ಪ್ರಾರಂಭವಾಗುತ್ತದೆ. ಶೀರ್ಷಿಕೆ ನೋಡಿದರೆ ತಿಳಿಯುತ್ತದೆ. ಅನ್ವರ್ ಈ ಶ್ಯಾಮಭಟ್ಟರ ಮನೆಗೆ ಬರುತ್ತಾನೆಂದು.

ಶ್ಯಾಮಭಟ್ಟರ ಮನೆಯಲ್ಲಿ ಶ್ಯಾಮಭಟ್ಟರು ಮತ್ತು ಮಗಳು ಮಂದಾಕಿನಿ ದೂರದರ್ಶನದಲ್ಲಿ ಬರುತ್ತಿರುವ ವಾರ್ತೆಯನ್ನು ನೋಡಿ ಅದರ ಬಗ್ಗೆ ಚರ್ಚಿಸುತ್ತಾರೆ. ಊರಿನಲ್ಲಿ ನಡೆಯುತ್ತಿರುವ ಕರ್ಫ್ಯೂ ಬಗ್ಗೆ ಮಾತಾಡುತ್ತಿರುತ್ತಾರೆ. ಅಷ್ಟರಲ್ಲಿ ಬಂದಂತಹ ಸೀತಮ್ಮ ಇವರ ಮಾತಿನ ಮಧ್ಯೆ 'ಪ್ರೀತಿ'ಯ ಬಗ್ಗೆ ಮಾತನಾಡಿ ಭಾವುಕಳಾಗುತ್ತಾಳೆ. ಪ್ರೀತಿ ಸೀತಮ್ಮಳ ದೂರದ ಸಂಬಂಧಿ ಮತ್ತು ಮಂದಾಕಿನಿಯ ಆತ್ಮೀಯ ಸ್ನೇಹಿತೆಯಾಗಿರುತ್ತಾಳೆ. 'ಪ್ರೀತಿ'ಯ ಪರವಾಗಿ ನಿಂತು ಮಂದಾಕಿನಿ ವಾದಿಸುತ್ತಾಳೆ. ಅವಳನ್ನು ಕೊಂದ ಸಮಾಜದ ಮೇಲೆ ಆಕ್ರೋಶ ವ್ಯಕ್ತಪಡಿಸುತ್ತಾಳೆ. ಅಷ್ಟರಲ್ಲಿ ಬಂದ ಮಹಾಬಲನನ್ನು ಶ್ಯಾಮಭಟ್ಟರು ವ್ಯಂಗ್ಯದಿಂದಲೇ ಪ್ರಶ್ನಿಸುತ್ತಾರೆ. ಮಹಾಬಲನ ಸಂಘದ ಬಗ್ಗೆ ಮತ್ತು ಅವರ ಚಟುವಟಿಕೆಯ ಬಗ್ಗೆ ಶ್ಯಾಮಭಟ್ಟರಿಗೆ ಅಸಮಾಧಾನವಿರುತ್ತದೆ. ಬೇರೆಯವರು ಹೇಳಿದಂತೆ ಕೇಳುವ ಜನ ನೀವು, ನಿಮಗೆ ಸ್ವಂತ ಬುದ್ಧಿ ಇಲ್ಲವೆಂದು ಆರೋಪಿಸುತ್ತಾರೆ. ಇವರ ಮಾತಿನ ಮಧ್ಯೆ ಹಿಂದೂ-ಮುಸ್ಲಿಂ ಎರಡೂ ಜನಾಂಗಗಳು ಏನೇನು ಮಾಡಿದರು ಎಂಬ ವಿಚಾರ ತೆಗೆದು ಆ ಎರಡೂ ಜನಾಂಗಗಳು ಮಾಡಿದ ಕೃತ್ಯವನ್ನು ಎತ್ತಿ ಹಿಡಿಯುತ್ತಿದ್ದರು. ಅಷ್ಟರಲ್ಲಿ ಅನ್ವರ್ ಓಡಿಬಂದು ಬಾಗಿಲಬಳಿ ಕುಸಿಯುತ್ತಾನೆ. ಎಲ್ಲರು ಅವನನ್ನು ಉಪಚರಿಸುತ್ತಾರೆ. ಆದರೆ, ಮಹಾಬಲ ಮಾತ್ರ ಇವನನ್ನು ಪೊಲೀಸರಿಗೆ ಒಪ್ಪಿಸೋಣ ಎನ್ನುತ್ತಾನೆ. ಅದನ್ನು ವಿರೋಧಿಸಿ ಶ್ಯಾಮಭಟ್ ಅನ್ವರ್‌ನನ್ನು ಮನೆಯಲ್ಲಿ ಇರಲು ಅವಕಾಶ ಮಾಡಿಕೊಡುತ್ತಾರೆ.

**'ಪಾಟೀಸವಾಲು'** ಎಂಬ ಶೀರ್ಷಿಕೆಯಡಿಯಲ್ಲಿ ಪ್ರಾರಂಭವಾಗಿ ಪಾಟೀಸವಾಲಿನಲ್ಲೇ ಮುಗಿಯುತ್ತೆ. ಮಹಾಬಲನಿಗೆ ಅನ್ವರ್‌ನನ್ನು ಮನೆಗೆ ಸೇರಿಸಿದ್ದು ಸರಿಕಾಣಲಿಲ್ಲ. ಈ ವಿಷಯದ ಬಗ್ಗೆ ಶ್ಯಾಮಭಟ್ಟರಲ್ಲಿ ಚರ್ಚೆ ಮಾಡುತ್ತಿದ್ದಾಗ ಅನ್ವರ್ ಬರುತ್ತಾನೆ. ಇವನ ಮೇಲಿನ ಅನುಮಾನದಿಂದ ಮಹಾಬಲ 'ನಿಂದು ಯಾವ ಊರು?', "ಅಣ್ಣ ತಮ್ಮಂದಿರೆಷ್ಟು?' ಎಂದು ಸಾವಾಲಿನ ಮೇಲೆ ಸವಾಲು ಹಾಕುತ್ತಾನೆ. ಅನ್ವರ್ ಅವನಿಂದ ತಪ್ಪಿಸಿಕೊಳ್ಳಲು ಏನೇನೋ ಹೇಳುತ್ತಾ ಇರುತ್ತಾನೆ. ಅಷ್ಟರಲ್ಲಿ ಮಂದಾಕಿನಿ ಕಾಫಿ ತೆಗೆದುಕೊಂಡು ಬರುತ್ತಾಳೆ. ಮಹಾಬಲನ ಪ್ರಶ್ನೆಯಿಂದ ತಪ್ಪಿಸಿಕೊಳ್ಳಲು ಅವನನ್ನೇ ಪ್ರಶ್ನೆಗಳ ಸುಳಿಯಲ್ಲಿ ಸಿಕ್ಕಿಸುತ್ತಾನೆ. ಮಂದಾಕಿನಿಯನ್ನು ಮಾತಾಡಿಸುವಾಗ ಅವಳಿಗೆ ಅನ್ವರ್‌ನಲ್ಲಿ ತನ್ನ ಅಣ್ಣನಾದ ಅನಂತನನ್ನು ಕಂಡೆ ಹಾಗೆ ಆಗಿ ಅವನನ್ನು ಹಿಡಿದು ಪ್ರಶ್ನಿಸುತ್ತಿರುವಾಗ, ಅನ್ವರ್‌ನಿಗೆ ಗಾಬರಿಯಾಗುತ್ತದೆ. ಇದನ್ನು ಗಮನಿಸಿದ ಶ್ಯಾಮಭಟ್ಟರು ಅನ್ವರ್‌ನಿಗೆ ಸಮಾಧಾನ ಹೇಳುತ್ತಾರೆ. ಇಷ್ಟರ ಮಧ್ಯೆ ಮಂದಾಕಿನಿ ತನ್ನ ಅನಂತಣ್ಣನ ಬಗ್ಗೆ ಹೇಳುತ್ತಾಳೆ. ತಾವು ಚಿಕ್ಕವರಾಗಿದ್ದಾಗ ಆಡಿದ ಆಟಗಳು. ಅವರಿಬ್ಬರ ಆತ್ಮೀಯತೆ ಮತ್ತು ಅವನು ಮನೆಬಿಟ್ಟು ಹೋಗಿದ್ದು ಎಲ್ಲವನ್ನು ಹೇಳುತ್ತಾಳೆ. ಇದನ್ನು ಕೇಳಿ ಭ್ರಾಂತನಾಗಿ

ಅನ್ವರ್ ಕೂರುತ್ತಾನೆ. ಭಿಕ್ಷುಕ / ಅನಂತ ಪಿಸುದನಿಯಲ್ಲಿ ಅನ್ವರ್ ... ಅನ್ವರ್.. ಎಂದು ಕೂಗಿ ಕರೆಯುತ್ತಾನೆ. ಅನಂತನು ತಾನು ಅಂದುಕೊಂಡಂತೆ ಕಥೆ ನಡೆಯುತ್ತಿದೆ ಹೀಗೆ ಮುಂದುವರೆಯಲಿ ಎಂದು ಹೇಳುತ್ತಾನೆ. ಇದು ಯಾವುದು ಅನ್ವರ್‌ನಿಗೆ ಅರ್ಥವಾಗುವುದಿಲ್ಲ. ಈಗ ನಡೆಯುತ್ತಿರುವ ಕಥೆಯನ್ನು ಬೇರೆ ಕಡೆಗೆ ತಿರುಗಿಸಬೇಕು. **'ದಿಸ್ ಈಸ್ ಎ ಪೊಲಿಟಕಲ್ ಪ್ಲೇಮೈಬಾಯ್!'**[೧] ಎಂದು ಅನಂತ ಹೇಳಿದಾಗ ಅನ್ವರ್‌ನಿಗೆ ಒಂದೂ ತಿಳಿಯದ ವಿಷಯ ಇದಾಗಿರುತ್ತದೆ. ಅಷ್ಟರಲ್ಲಿ ಬಂದಂತಹ ಮಹಾಬಲನನ್ನು ಗಮನಿಸಿ ಅನಂತ ಹೊರಡುತ್ತಾನೆ. ಯಾರ ಜೊತೆ ಮಾತಾಡುತ್ತಿದ್ದೆ ಎಂದು ಮಹಾಬಲ ಕೇಳುತ್ತಾನೆ. ಗಾಬರಿಕೊಂಡ ಅನ್ವರ್ ಯಾವುದೋ ನಾಟಕದ ಮಾತು ಆಡಿಕೊಳ್ಳುತ್ತಿದ್ದೆ ಎಂದು ಹೇಳುತ್ತಾನೆ. ಈ ಅಭ್ಯಾಸ ಬೇರೆ ಇದೆಯಾ ನಿನಗೆ ಎಂದು ವ್ಯಂಗ್ಯವಾಗಿ ಕೇಳುತ್ತಾನೆ. ಅದಕ್ಕೆ ಅನ್ವರ್ ಶೇಕ್‌ಸ್ಪಿಯರ್ ಹೇಳಿದ **'ಆಲ್ ದ ವರ್ಲ್ಡ್ ಈಸ್ ಎ ಸ್ಟೇಜ್'** ಎಂದು ಹೇಳುತ್ತಾನೆ. ಮಹಾಬಲನು ಇರಬಹುದು ಆದರೆ, ನನಗೆ ಮೊದಲಿನಿಂದ ನಾಟಕವರು ಅಂದರೆ ಸ್ವಲ್ಪ ಅನುಮಾನವೇ! ಎಂದು ಹೇಳುವುದರೊಂದಿಗೆ ಮಹಾಬಲನ ಪಾಟೀ ಸವಾಲು ಮುಗಿಯುತ್ತದೆ.

ದೃಶ್ಯ ನಾಲ್ಕರಲ್ಲಿ **ರಾಜಕಾರಣದ ಪ್ರವೇಶ** ಎಂಬ ಶೀರ್ಷಿಕೆಯಿಂದ ಪ್ರಾರಂಭವಾಗುತ್ತದೆ. ಶ್ಯಾಮಭಟ್ಟರ ಮನೆಯಲ್ಲಿ ಎಂದಿನಂತೆ ಶ್ಯಾಮಭಟ್ಟರು ಮತ್ತೆ ಮಹಾಬಲನ ನಡುವೆ ವಾದ ಏರ್ಪಡುತ್ತದೆ. ಶ್ಯಾಮಭಟ್ಟರು ಆಶಾವಾದಿಗಳಾದರೆ, ಮಹಾಬಲನು ವಾಸ್ತವವಾದಿ. ಸಮಾಜದಲ್ಲಿ ನಡೆಯುತ್ತಿರುವ ಅಸಮಾನತೆಯ ವಿರುದ್ಧ ಜನರು ಎದ್ದು ನಿಂತಿದ್ದಾರೆ. ಇದರಿಂದಾಗಿ ಸ್ವಲ್ಪ ಹಿಂಸೆ, ರಕ್ತಪಾತ ಆಗೋದು ಅನಿವಾರ್ಯ ಎಂಬ ನಿಲುವು ಮಹಾಬಲನದಾದರೆ, ಇವತ್ತು ನಾಳೆ ಈ ದೇಶದಲ್ಲಿ ಒಂದು ನಾಗರಿಕ ಪ್ರಜ್ಞೆ ಜಾಗೃತವಾಗುತ್ತದೆಂಬ ಆಶಾವಾದ ನಿಲುವನ್ನು ಶ್ಯಾಮಭಟ್ಟರು ಹೊಂದಿರುತ್ತಾರೆ.

ಮಹಾಬಲನು ತನ್ನ ದೊಡ್ಡಪ್ಪರಾದ ಶ್ಯಾಮಭಟ್ಟರಿಗೆ ವಾಸ್ತವದ ಅರಿವನ್ನು ಮೂಡಿಸಲು ಮುಂಬಯಿಯಲ್ಲಿ ನಡೆದ ಒಂದು ದುರಂತದ ಘಟನೆಯನ್ನು ಹೇಳಿದಾಗ ಶ್ಯಾಮಭಟ್ಟರು ಲೇವಡಿ ಮಾಡಿ ಮಾತನ್ನು ತಳ್ಳಿ ಹಾಕುತ್ತಾರೆ. ಅದಕ್ಕೆ ಮಹಾಬಲ ಇವತ್ತಿನ ಸಂದರ್ಭದಲ್ಲಿ ನಾವು ಎಷ್ಟು ಬೇಡ ಅಂದರೂ **'ರಾಜಕಾರಣ ನೇರವಾಗಿ ನಮ್ಮ ಮನೆಯೊಳಗೆ ಪ್ರವೇಶ ಮಾಡುತ್ತಾ ಇದೆ'**[೨] ಎಂದು ಸೂಕ್ಷ್ಮವಾಗಿ ಸಮಾಜದ ಪರಿಸ್ಥಿತಿಯನ್ನು ತಿಳಿಹೇಳುತ್ತಾನೆ. ಇದನ್ನು ಒಪ್ಪಿಕೊಳ್ಳುವ ಶ್ಯಾಮಭಟ್ಟರು **"ಮನೆಯಲ್ಲಿ ಇದ್ದ ಶ್ರೀರಾಮ ಚಂದ್ರನನ್ನೇ ಎಳೆದು ಬೀದೀಗೆ ತೆಗೊಂಡು ಬಂದರು..... ಮನೆಯಲ್ಲಿ ಇರಬೇಕಾದದ್ದು ಬೀದಿಗೆ ಬಂದ ಮೇಲೆ ಬೀದಿಯಲ್ಲಿ ಇರೋದೆಲ್ಲ ಮನೆಯೊಳಕ್ಕೆ ಬಂದೇ ಬರುತ್ತದೆ. ಏನುಮಾಡೋ ಹಾಗಿಲ್ಲ ಅನುಭವಿಸಲೇಬೇಕು ಈಗ"**[೩] ಎಂದು ಹೇಳುತ್ತಾರೆ. ಶ್ಯಾಮಭಟ್ಟರ ಪ್ರಕಾರ ಸಮಸ್ಯೆ ಎಲ್ಲಿದೆಯೋ ಉತ್ತರವೂ ಅಲ್ಲೇ ಇದೆ ಎಂಬ ಆಶಾವಾದವನ್ನು ವ್ಯಕ್ತಪಡಿಸುತ್ತಾರೆ. ಅಷ್ಟರಲ್ಲಿ ಬಂದ ಮಂದಾಕಿನಿಯು ಇವರ ರಾಜಕೀಯ ಸಂಭಾಷಣೆಯನ್ನು ನಿಲ್ಲಿಸಿ ತನ್ನ ಸಮಸ್ಯೆಯನ್ನು ಮುಂದಿಡುತ್ತಾಳೆ.

---

೧: ಚೂ.ಕ.ಅ.ಕ (ಪುಟ-೨೫)

೨: ಚೂ.ಕ.ಪು. (ಪುಟ-೨೮))

೩: ಚೂ.ಕ.ಕ. (ಪುಟ-೨೮))

ಅವಳಿಗೆ ಆನಂದ ಎಂದು ಹೇಳಿಕೊಂಡು ಬಂದಿರುವ ಅನ್ವರ್‌ನನ್ನು ನೋಡುವಾಗ ತನ್ನ ಅನಂತಣ್ಣನ್ನ ಕಂಡ ಹಾಗೆ ಆಗಿರುತ್ತದೆ. ಇದನ್ನು ಕೇಳಿದ ಸೀತಮ್ಮ ಭಾವುಕಳಾಗುತ್ತಾಳೆ. ಮತ್ತು ಶ್ಯಾಮಭಟ್ಟರು ಗೊಂದಲಕ್ಕೀಡಾಗುತ್ತಾರೆ.

ದೃಶ್ಯ ಐದರಲ್ಲಿ **'ನ್ಯಾಯಾಧೀಶರ ಮಗನ ವಕಾಲತ್ತು'** ನಡೆಯುತ್ತದೆ. ಇಲ್ಲಿಂದ ನಾಟಕ ಆಯಾಮವೇ ಬದಲಾಗುತ್ತದೆ. ಮತ್ತು ನಾಟಕಕಾರರ ಆಶಯವೆನೆಂಬುದು ಈ ದೃಶ್ಯದ ನಂತರದಿಂದ ತಿಳಿದುಬರುತ್ತದೆ.

ಶ್ಯಾಮಭಟ್ಟರ ಮನೆಯಲ್ಲಿ ಇದ್ದ ಅನ್ವರ್‌ನನ್ನು ಅನಂತ ಬಂದು ಕರೆಯುತ್ತಾನೆ. ನಿಧಾನವಾಗಿ ಅನಂತನ ಫೋಟೋ ಹಿಂದಿನಿಂದ ಬರುತ್ತಾನೆ ಅನಂತ. ಇದನ್ನು ಕಂಡು ಗಾಬರಿಯಿಂದ ಅನ್ವರ್ ನೀನು ಯಾರು, ಯಾತಕ್ಕಾಗಿ ಬಂದ್ದೀಯಾ, ಎಂದೆಲ್ಲಾ ಕೇಳಿದಾಗ ತಾನು ಈ ಮನೆಯಿಂದ ಪಲಾಯನ ಮಾಡಿದ ಏಕಮಾತ್ರ ಪುತ್ರ ಎಂದು ತನ್ನ ಕಥೆ ಹೇಳುತ್ತೇನೆಂದು ಹೇಳರಾರಂಭಿಸುತ್ತಾನೆ.

ಹದಿನೈದು ವರ್ಷದ ಹಿಂದೆ ಮನೆಬಿಟ್ಟಿದ್ದು, ಮದ್ರಾಸಿಗೆ ಹೋಗಿ ಹೋಟೇಲ್ ಒಂದರಲ್ಲಿ ಕೆಲಸಮಾಡಿದ್ದು, ಅಮೇರಿಕಾದ ಡೆಲ್ಟಾ ಏರ್‌ಲೈನ್ಸ್‌ನಲ್ಲಿ ಕೆಲಸಮಾಡಿದ್ದು, ಅಲ್ಲಿ ಅಮೆರಿಕಾ ಹುಡುಗಿಯ ಪರಿಚಯವಾಗಿದ್ದು, ಅವಳೊಂದಿಗೆ ನ್ಯೂಯಾರ್ಕಿನಲ್ಲಿ ಕೆಲಸಕ್ಕೇ ಸೇರಿದ್ದು ಎಂದು ಹೇಳುತ್ತಿರುವಾಗ ಅನ್ವರ್‌ನಿಗೆ ಇದು ಒಂದು ಕಟ್ಟು ಕಥೆಯಂತೆ ಕಂಡು ವ್ಯಂಗ್ಯಮಾಡುತ್ತಾನೆ. ಆದರೂ, ಅನಂತ ತನ್ನ ಕಥೆಯನ್ನು ಮುಂದುವರೆಸುತ್ತಾನೆ. ಮುಂದೆ ಆ ಅಮೇರಿಕಾದ ಹುಡುಗಿ 'ಎಲಿಸಾ'ಳೊಡನೆ ಮದುವೆಯಾಗಿ ನ್ಯೂಯಾರ್ಕ್‌ನ 'ಫಿಫ್ತ್ ಅವೆನ್ಯೂ' ದಲ್ಲಿ ಮನೆಕೊಂಡುಕೊಂಡು ಅಲ್ಲೇ ಇದ್ದೀವಿ ಎಂದನು. ಆದರೂ ಅನ್ವರ್‌ನಿಗೆ ನಂಬಲು ಆಗದೆ, ಅಲ್ಲಿ ಸುಖವಾಗಿ ಇದ್ದವನು ಇಲ್ಲಿಗೆ ಏಕೆ ಬಂದಿರುವೆ ಎಂದಾಗ ಅನಂತನು ತಾನು ಇನ್ನೂ ನ್ಯಾಯಾರ್ಕಿನ ಫ್ಲಾಟ್‌ನಲ್ಲೇ ಇದ್ದೀನಿ. **"ಭ್ರಾಮಕ ವಾಸ್ತವ – ವರ್ಚುವಲ್ ರಿಯಾಲಿಟಿ ಅಂದರೆ, ಒಂದು ನಿಜವಾ ಸ್ಥಳಕ್ಕೂ ಒಂದು ವೆಬ್‌ಸೈಟಿಗೂ ನಡುವೆ ಇರೋ ವ್ಯತ್ಯಾಸ"**[೧] ಎಂದು ಆಧುನಿಕ ಕಂಪ್ಯೂಟರ್ ಭಾಷೆಯನ್ನು ಬಳಸಿ ಮಾತಾಡುತ್ತಾನೆ. ನಂತರ ತಾನು ಇಲ್ಲಿಗೆ ಬಂದಂತಹ ನಿಜ ಸಂಗತಿಯನ್ನು ತಿಳಿಸುತ್ತಾನೆ. ಅಂದರೆ ಅನ್ವರ್ ಮನೆಯವರಿಗೆ ಹೋಗಿ ತಾನೇ ಮನೆಬಿಟ್ಟು ಓಡಿಹೋದ ಅನಂತ ಎಂದು ಹೇಳಿ ಮನೆ ಮಗನಾಗಿ ರೂಪಾಂತರವಾಗಬೇಕೆಂದು ಹೇಳಿದಾಗ ಅನ್ವರ್ ಒಪ್ಪುವುದಿಲ್ಲ. ಇದು ನಿನಗಾಗಿ ಮಾಡುತ್ತಿರುವ ಕೆಲಸ ಇದರಿಂದ ನಿನಗೆ ಒಳ್ಳೆಯದಾಗುತ್ತದೆ ಎಂದು ಹೇಳುತ್ತಾನೆ. ಇಂದಿದ ದೇಶದ ಸಮಸ್ಯೆಗಳು ಜಾತಿ, ಕುಲ, ಊರು, ಧರ್ಮ, ಜನಾಂಗ, ಭಾಷೆ ಇವೆಲ್ಲವೂ ರಾಜಕಾರಣ ಮುಖಮಾಡಿ ಬದುಕು ಸಾವಿನ ಹಾದಿಯಲ್ಲಿ ನಡೆಯುತ್ತಿದೆ. ಈ ರಾಜಕಾರಣದಲ್ಲಿ ಬದುಕಬೇಕೆಂಬ ಆಸೆ ಇದ್ದರೆ ನನ್ನ ಮಾತಿಗೆ ಒಪ್ಪಿ ನೀನು ಅನಂತನಾಗಿ ಪರಿವರ್ತನೆಯಾಗು ಎಂದು ಹೇಳುತ್ತಾನೆ.

ಇದೆಲ್ಲವನ್ನು ಕೇಳಿ ವಿಧಿಇಲ್ಲದೆ, ಬದುಕು ಮುಖ್ಯವೆನಿಸಿ ಅನಂತನ ಮಾತಿಗೆ ಅನ್ವರ್ ಒಪ್ಪುತ್ತಾನೆ. ಅನಂತನು ತನ್ನ ಚಿಕ್ಕವಯಸ್ಸಿನ ಕತೆಗಳನ್ನು ಹೇಳಿಕೊಡುತ್ತಾನೆ. ಮತ್ತಷ್ಟನ್ನು ಬರೆದುಕೊಟ್ಟು ಶುಭವಾಗಲಿ ಎಂದು ಹರಸುತ್ತಾನೆ. ಕೊನೆಗೆ ಅನ್ವರ್ ನೀನು ಇಷ್ಟೆಲ್ಲಾ ಮಾಡಿದ್ದು ಕೇವಲ ನನ್ನ ಜೀವನ ಉಳಿಸಲು ಮಾತ್ರವಾ ಎಂದು ಕೇಳಿದಾಗ ಒಂದು ಸಿನಿಮಾ ಕಥೆಯನ್ನು ಹೇಳಿ ಎಲ್ಲಾವೂ **'ಋಣಾನುಬಂಧ'** ಎಂದಷ್ಟೇ ಹೇಳಿ ಹೊರಡುತ್ತಾನೆ.

---

೧: **ಚೂ.ಕ.ಕ. (ಪು– ೩೩)**

ದೃಶ್ಯ ಆರರಲ್ಲಿ ಅನ್ವರ್‌ನು ಅನಂತನನ್ನಾಗಿ ಬದಲಾಗುತ್ತಾನೆ ಅದನ್ನು **"ಅದಲು ಬದಲು........... ಕಂಚೀ ಕದಲು....."** ಎಂಬ ಶೀರ್ಷಿಕೆಯೊಂದಿಗೆ ಪ್ರಾರಂಭವಾಗುತ್ತದೆ.

ಶ್ಯಾಮಭಟ್ಟರು ಅನ್ವರ್ ಕೊಟ್ಟಂತಹ ಕಾಗದವನ್ನು ಓದುತ್ತಿರುತ್ತಾರೆ. ಸೀತಮ್ಮ, ಮಂದಾಕಿನಿ, ಮಹಾಬಲ ಅವರ ಸುತ್ತ ಸೇರಿದ್ದಾರೆ. ಆ ಕಾಗದದಲ್ಲಿ ಅನಂತ ಮನೆ ಬಿಟ್ಟು ಹೋದ ಮೇಲೆ ಏನಾಯಿತು ಎಂದೆಲ್ಲಾ ಬರೆದಿರುತ್ತಾನೆ. ನಾನು ಮನೆ ಬಿಟ್ಟು ಹೋದ ಮೇಲೆ ಈ ಮನೆಗೆ ಲಾಭ ಆಯಿತೋ ನಷ್ಟ ಆಯಿತೋ ಗೊತ್ತಿಲ್ಲ, ಆದರೆ, ನನಗೆ ವೈಯಕ್ತಿಕವಾಗಿ ತುಂಬ ಲಾಭ ಆಗಿದೆ. ನಾನು ಒಬ್ಬ ಮನುಷ್ಯ ಆಗಿದ್ದೇ ಮನೆ ಬಿಟ್ಟು ಹೊರಟಮೇಲೆ. **"ಇದೆಲ್ಲಾ ಇತಿಹಾಸವೇ ಆಯಿತು. ವರ್ತಮಾನಕ್ಕೆ ಬರೋದಾದರೆ, ನಾನು ಮರಳಿ ಬಂದಿದ್ದೇನೆ. ನಿಮ್ಮ ಮನೆಯಲ್ಲೇ ಬೇರೆ ಹೆಸರು, ಬೇರೆ ಗುರುತು, ಬೇರೆ ವ್ಯಕ್ತಿತ್ವ ಮತ್ತು ಸ್ವಲ್ಪ ಮಟ್ಟಿಗೆ ಬೇರೆ ರೂಪವನ್ನು ಪಡೆದುಕೊಂಡಿದ್ದೇನೆ"**[೧] ಎಂದು ಬರೆದಿಟ್ಟಿದ್ದನು. ತಕ್ಷಣ ಮಹಾಬಲನು ಇದು ಒಂದು ಸಿನಿಮಾ ಕಥೆ ತರಹ ಇದೆ ಎನ್ನುತ್ತಾನೆ. ಮಂದಾಕಿನಿಯ ಈ ಕತೆಯನ್ನು ನಂಬಬೇಕೋ ಬೇಡವೋ ಎಂಬ ಗೊಂದಲಕ್ಕೆ ಸಿಲುಕುತ್ತಾಳೆ. ಶ್ಯಾಮಭಟ್ಟರಿಗೂ ಹಾಗೆ ಅನ್ನಿಸುತ್ತದೆ ಎಂದಾಗ ಮಹಾಬಲನು ಅವರ ತೀರ್ಮಾನದ ವಿರುದ್ಧ ಮಾತಾಡುತ್ತಾನೆ. ಅಷ್ಟರಲ್ಲಿ ಅನ್ವರ್ ಬರುತ್ತಾನೆ. ಸೀತಮ್ಮ ಅನಂತನನ್ನೂ ನೋಡಿ ದುಃಖ ತಡೆಯಲಾರದೆ ಅಳಲಾರಂಭಿಸುತ್ತಾಳೆ. ಅನ್ವರ್, ನನ್ನನ್ನು ನಂಬಿ ಎಂದು ಒತ್ತಾಯ ಮಾಡುವುದಿಲ್ಲ. ನಂಬಬೇಕು ಅಂತಿದ್ದರೆ ಅದಕ್ಕೆ ಸಹಾಯ ಮಾಡೋ ಒಂದೆರೆಡು ಸಂಗತಿ ಹೇಳುತ್ತೇನೆಂದು ಹೇಳುತ್ತಾನೆ. ಸೀತಮ್ಮ ಅದನ್ನೆಲ್ಲಾ ನಂಬಿ ತನ್ನ ಮಗ ಸಿಕ್ಕಿದನೆಂದು ಸಂತೋಷದಲ್ಲಿ ದೇವರಿಗೆ ತುಪ್ಪದ ದೀಪ ಹಚ್ಚು ಎಂದು ಹೇಳಿ ಅನಂತನಿಗೆ ಇಷ್ಟವಾದ ಕಾಯಿರಸ ಮಾಡುತ್ತೇನೆಂದು ಹೇಳುತ್ತಾಳೆ.

ಇಷ್ಟದರೂ ಶ್ಯಾಮಭಟ್ಟರಿಗೆ ನಂಬಿಕೆ ಹುಟ್ಟಲಿಲ್ಲ. ಮಹಾಬಲನಂತು ಅನ್ವರ್‌ನ ಬಳಿಬಂದು ನನಗೆ ಇದನ್ನೆಲ್ಲಾ ನಂಬೋದಕ್ಕೆ ಸಾಧ್ಯವಿಲ್ಲವೆಂದು ಹೇಳುತ್ತಾನೆ.

ದೃಶ್ಯ ಏಳು **'ಪ್ರತ್ಯಭಿಜ್ಞಾನದದ ಪ್ರಹಸನ'** ಎಂಬ ಶೀರ್ಷಿಕೆಯಲ್ಲಿ ಪ್ರಾರಂಭವಾಗುತ್ತದೆ. ಹೆಸರೇ ಸೂಚಿಸುವಂತೆ ಇಲ್ಲಿ ಹ್ಯಾಸದ ಪ್ರಸಂಗಗಳು ಕಂಡುಬರುತ್ತವೆಯಾದರೂ ಅನಂತನ ರೂಪಪಡೆದುಕೊಂಡ ಅನ್ವರ್‌ನ ಸತ್ವಪರೀಕ್ಷೆಯೂ ಆಗುತ್ತದೆ. ಮತ್ತು ಈ ದೃಶ್ಯದಲ್ಲಿ 'ಹವ್ಯಕ ಭಾಷೆ'ಯ ಸೊಗಡನ್ನು ಲೇಖಕರು ತಂದು, ತಿಳಿಹಾಸ್ಯದಲ್ಲಿ ಈ ದೃಶ್ಯ ಕಂಡುಬರುತ್ತದೆ.

ದೃಶ್ಯ ಪ್ರಾರಂಭದಲ್ಲಿ ಮನೆಯ ಪುರೋಹಿತರು ಚಕ್ರಪಾಣಿ ಶಾಸ್ತ್ರಿಗಳು, ಶ್ಯಾಮಭಟ್ಟರು ಮತ್ತು ಹಿಂದೆ ಮನೆ ಡ್ರೈವರ್ ಆಗಿದ್ದ ಕುಟ್ಟಿ ಇರುತ್ತಾರೆ. ಶಾಸ್ತ್ರಿಗಳು ಶ್ಯಾಮಭಟ್ಟರ ಮಗ ಮರಳಿ ಬಂದಿರುವುದನ್ನು ಕಂಡು ಆಶ್ಚರ್ಯ ಪಡುತ್ತಾರೆ. ಅಷ್ಟರಲ್ಲಿ ಶ್ಯಾಮಭಟ್ಟರ ಚಿಕ್ಕಮ್ಮರಾದ ಭವಾನಮ್ಮ ಬರುತ್ತಾರೆ. ಅನಂತ ಬಂದನೆಂದು ತಿಳಿದು ಅವನನ್ನು ಕಾಣಲು ಬಂದಿರುತ್ತಾಳೆ. ಭವಾನಮ್ಮ ಆಡುವ ಭಾಷೆಯಿಂದ ಹವ್ಯಕ ಭಾಷೆಯ ಸೊಗಡನ್ನು ನಾಟಕಕಾರರು ತಂದಿದ್ದಾರೆ.

---

೧: ಚೂ.ಕ. (ಪು–೩೮)

ಶ್ಯಾಮಭಟ್ಟರು ಅನ್ವರ್‌ನಿಗೆ ಶಾಸ್ತ್ರಿಗಳಿಗೆ ನಮಸ್ಕಾರ ಮಾಡಲು ತಿಳಿಸುತ್ತಾರೆ. ನಮಸ್ಕಾರ ಮಾಡುವಾಗ ಎಡಗೈ ಮುಂದಾಗುತ್ತದೆ. ಹಾಗೆ ಎಡಗೈಯಲ್ಲಿ ಮಾಡಬಾರದು ಎಂದಾಗ ಅನ್ವರ್ ಗಾಬರಿಗೊಳ್ಳುತ್ತಾನೆ. ಶಾಸ್ತ್ರಿಗಳೇ ಸಮಾಧಾನ ಮಾಡುತ್ತಾರೆ. ಅಷ್ಟರಲ್ಲಿ ಕುಟ್ಟಿ ಇಂತಹದ್ದೇ ಒಂದು ಪ್ರಸಂಗ ಹೇಳುತ್ತಾನೆ ಎಲ್ಲರೂ ನಗಲಾರಂಭಿಸುತ್ತಾರೆ. ಆದರೆ, ಅನ್ವರ್ ಮಾತ್ರ ತುಂಬ ಮುಜುಗರಗೊಂಡಂತೆ ಇರುತ್ತಾನೆ.

ಭವಾನಮ್ಮ ಅನಂತನನ್ನು ನೋಡಿ ಸಂತೋಷಗೊಂಡು ಅವನೊಂದಿಗೆ ಮಾತಾಡುತ್ತಿರುತ್ತಾಳೆ. ಅನ್ವರ್ ಅಸಹಾಯಕನಂತೆ ಕೂತಿರುತ್ತಾನೆ. ಹಳೆಯ ವಿಷಯವನ್ನೆಲ್ಲಾ ಹೇಳುವಾಗ ಅನ್ವರ್‌ನಿಗೆ ಒಂದೂ ತಿಳಿಯದ ವಿಷಯವಾಗಿರುತ್ತದೆ. ಚಿಕ್ಕಮ್ಮ ತಂದ ಕರಿಮಾರಲ ಕಾಯಿನ ತಿನ್ನಲು ಗೊತ್ತಾಗದಿದ್ದಾಗ ಎಲ್ಲಾ ಮರೆತೇ ಹೋಗಿದ್ದಿಯ್ಯಾ – **"ನಿಂಗ್ ಅಪ್ಪ ಮಗ ಇಬ್ಬರೂ ಹವೀಕರ ಆಚಾರ ವಿಚಾರ ಎಲ್ಲಾ ಬಿಟ್ಟು ಹೊಡದು ಬುಡದಿ"** (ಶ್ಯಾಮಭಟ್ಟರ ಕಡೆಗೆ ತಿರುಗಿ) **ಇಂವ, ಈಗ ಅತ್ಲಾಗೆ ಹವೀಕರೂ ಅಲ್ಲ, ಇತ್ಲಾಗೆ ಪ್ಯಾಟೀವನೂ ಅಲ್ಲ– ಹಂಗೆ ಒಂಥರಾ ಯಡಬಿಡಂಗಿ ಆಗಿಹೋಯ್ದು"**[೧] ಎಂದು ಹೇಳುತ್ತಾಳೆ.

ಭವಾನಮ್ಮ ಅನ್ವರ್‌ನಿಗೂ, ಶ್ಯಾಮಭಟ್ಟರಿಗೂ ಹೊಂದಿಕೊಂಡು ಹೋಗುವಂತೆ ತಿಳಿ ಹೇಳುತ್ತಾನೆ. ಅಷ್ಟರಲ್ಲಿ ಮನೆ ಡ್ರೈವರ್ ಆಗಿದ್ದ ಕುಟ್ಟಿ ಅನ್ವರ್‌ನಿಗೆ ನೀನು ಸಣ್ಣವನಾಗಿದ್ದಾಗ ನನ್ನನ್ನು ಏನಂತು ಕರೆಯುತ್ತಿದ್ದೆ ಹೇಳು ಎಂದು ಕೇಳಿ ಗಾಬರಿ ಹುಟ್ಟಿಸುತ್ತಾನೆ. ಕೊನೆಗೆ ಅನ್ವರ್ ಏನೋ ಉತ್ತರ ಕೊಟ್ಟು ಬಚಾವಾಗುತ್ತಾನೆ.

ಕೊನೆಗೆ ಅನ್ವರ್ ತನ್ನಲ್ಲೇ ತಾನು ಪ್ರಶ್ನೆ ಹಾಕಿಕೊಳ್ಳುತ್ತಾನೆ.

**"ನಾನು ಯಾರು?**

**ಯಾವ ಊರು?**

**ನಾನು ಅಂದರೆ ನಾನೇ?**

**ಅಥವಾ ನಿಮ್ಮ ಕಣ್ಣಿನಲ್ಲಿ ಈಜಾಡೋ ಮೀನೇ?"**[೨]

ದೃಶ್ಯ ಎಂಟು ಆರಂಭವಾಗುವುದು **'ನೆನಪಿನ ದೋಣಿ'** ಎಂಬ ಶೀರ್ಷಿಕೆಯಿಂದ. ರಾಷ್ಟ್ರಕವಿ ಕುವೆಂಪು ಅವರ ಆತ್ಮಕತೆಯ ಶೀರ್ಷಿಕೆಯು 'ನೆನಪಿನ ದೋಣಿ'. ಇದರಲ್ಲಿ ಅವರ ಜೀವನ ಅತ್ಯಂತ ಅಮೂಲ್ಯ ಕ್ಷಣಗಳನ್ನು ಚಿತ್ರಿಸಿದ್ದಾರೆ. ಹಾಗೆ ಈ ನಾಟಕದಲ್ಲಿಯೂ ಕೂಡ ಮಂದಾಕಿನಿಯು ತಾನು ಅಣ್ಣನೊಂದಿಗೆ ಕಳೆದ ಅಮೂಲ್ಯ ಕ್ಷಣಗಳನ್ನು ಬಿಚ್ಚಿಡುತ್ತಾ ಹೋಗುತ್ತಾಳೆ. ಈ ಶೀರ್ಷಿಕೆಯು ನಾಟಕದ ಈ ದೃಶ್ಯಕ್ಕೆ ಅತ್ಯಂತ ಸೂಕ್ತವಾಗಿದೆ.

ಮಂದಾಕಿನಿಯು ತನ್ನ ಅಣ್ಣನೊಂದಿಗೆ ಕಳೆದ ಕ್ಷಣವನ್ನು ಅನ್ವರ್‌ನೊಂದಿಗೆ ಹೇಳುತ್ತಿರುವಾಗ ಅನ್ವರ್‌ನಿಗೆ ಅನಂತನ ವಿಷಯಗಳು ಗೊತ್ತಿರುವುದರಿಂದ ಮಂದಾಕಿನಿಯೊಂದಿಗೆ ಮಾತನ್ನು ಮುಂದುವರೆಸಿ ಇಬ್ಬರೂ,

---

೧: ಚೂ.ಕ. (ಪು–೪೫).

೨: ಚೂ.ಕ.ಅ.ಕ. (ಪುಟ–೪೯)

ಬಾಲ್ಯದ ನೆನಪನ್ನು ಹಂಚಿಕೊಳ್ಳುತ್ತಾರೆ. ಮಾತಿನ ಮಧ್ಯದಲ್ಲಿ ಅತ್ಯಂತ್ಯ ಪ್ರೀತಿಯಿಂದ ಮಂದಾಕಿನಿ ಅಣ್ಣ ಎಂದು ಆಲಂಗಿಸಿದಾಗ ಮುಜುಗರಗೊಂಡ ಅನ್ವರ್ ಹಿಂದಕ್ಕೆ ಸರಿಯುತ್ತಾನೆ.

ಮನೆಯವರ ಭಾವನೆಗಳಿಗೆ ಮೋಸ ಮಾಡುತ್ತಿದ್ದೇನೆ ಎಂಬ ಭಾವನೆಯಿಂದ ಹೊರಬರಲು ಅನಂತನ ಸಹಾಯ ಕೇಳುತ್ತಾನೆ. ಆದರೆ, ಅವನಿಂದ ನಿರೀಕ್ಷಿಸಿದ ಸಹಾಯ ದೊರಕದೆ ಕಂಗಾಲಾಗುತ್ತಾನೆ. ನಿನ್ನ ಸತ್ಯವನ್ನು ನೀನೇ ಕಂಡುಕೊಳ್ಳಬೇಕೆಂದು ಹೇಳಿ ಇದೇ ನನ್ನ-ನಿನ್ನ ಕೊನೆ ಭೇಟಿ ಎಂದು ವಿದಾಯ ಹೇಳುತ್ತಾನೆ ಅನಂತ.

ದೃಶ್ಯ ಒಂಭತ್ತರಲ್ಲಿ ಅನಂತ ಎಂದು ಹೇಳಿಕೊಂಡು ಬಂದಂತಹ ಅನ್ವರ್‌ನ ಸತ್ಯ ಮಹಾಬಲನಿಗೂ, ಮಹಾಬಲನ ಹಿಂದಿನ ಕ್ರೌರ್ಯದ ಸತ್ಯ ಅನ್ವರ್‌ನಿಗೂ ತಿಳಿಯುತ್ತದೆ. **'ಈ ಕತ್ತಲೆಗೆ ಹತ್ತೆ ತಲೆ....?'** ಎಂಬ ಶೀರ್ಷಿಕೆ ಈ ದೃಶ್ಯಕ್ಕಿದೆ.

ಮಹಾಬಲನು ಅನ್ವರ್‌ನಿಗೆ ತನ್ನ ಹಿಂದಿನ ಕತೆ ಹೇಳುತ್ತಾನೆ. ತನ್ನ ತಂದೆ ಹಿಂದೂ, ತಾಯಿ ಮುಸ್ಲಿಂ. ನಮ್ಮ ತಂದೆ ಇದ್ದ ಊರಿನಲ್ಲಿ ಆದ ಕೋಮು ಗಲಭೆಯಲ್ಲಿ ಮನೆ-ಮಠ ಕಳೆದುಕೊಂಡ ಹೆಂಗಸನ್ನು ಮದುವೆ ಆದ. ಅವಳಿಗೆ ಹುಟ್ಟಿದವನೇ ನಾನು ಎಂದನು. ಚಿಕ್ಕ ವಯಸ್ಸಿನಲ್ಲಿ ಅನುಭವಿಸಿದ ನೋವು, ಸಂಕಟವೇ ಇಂದು ಮಹಾಬಲನನ್ನು ಹಿಂಸಾತ್ಮಕ ಹಾದಿಯನ್ನು ತುಳಿಯುವಲ್ಲಿ ಪ್ರೇರೇಪಿಸುತ್ತದೆ. ಮಹಾಬಲನು ನಾಟಕದಲ್ಲಿ ಆರ್.ಎಸ್.ಎಸ್. ಪ್ರತಿನಿಧಿ ಎಂಬಂತೆ ಗೋಚರಿಸುತ್ತಾನೆ. ಆರ್.ಎಸ್.ಎಸ್. ಎಂಬ ಪದವನ್ನು ನಾಟಕದಲ್ಲಿ ಎಲ್ಲೂ ಉಲ್ಲೇಖಿಸದಿದ್ದರೂ, ಪರೋಕ್ಷವಾಗಿ ಅದನ್ನೇ ಹೇಳುವಂತೆ ನಾಟಕದಲ್ಲಿ ಬಂದಿದೆ.

ಮಹಾಬಲನ ಪ್ರಕಾರ 'ಗೋರಾ' ಕಾದಂಬರಿಯ ನಾಯಕನ ವಿರುದ್ಧ ಪಾತ್ರ ನನ್ನದು. ಅಂದರೆ, ಇತಿಹಾಸವನ್ನು ವರ್ತಮಾನದಿಂದ ಬದಲಾಯಿಸಬೇಕು ಮತ್ತು ಇತಿಹಾಸಕ್ಕೆ ಪ್ರತಿಕಾರ ಮಾಡಿ ಸೇಡು ತೀರಿಸಿಕೊಳ್ಳಬೇಕು ಎನ್ನುತ್ತಾನೆ. ಆದ್ದರಿಂದಲೇ ಅನ್ವರ್ ಹಿಂದೂ ಹುಡುಗಿಯಾದ ಪ್ರೀತಿಯನ್ನು ಓಡಿಸಿಕೊಂಡು ಹೋದಾಗ, ಮಹಾಬಲ ಮತ್ತು ಅವನ ಕಡೆಯವರು ಅನ್ವರ್‌ನ ಮನೆಯವರನ್ನೆಲ್ಲಾ ಕೊಂದುಹಾಕಿ ಅನ್ವರ್‌ನನ್ನು ಕೊಲ್ಲಲು ಅವನನ್ನು ಹುಡುಕುತ್ತಿರುತ್ತಾರೆ.

ತನ್ನ ತಂದೆ-ತಾಯಿ, ಪರಿವಾರವೆನ್ನೆಲ್ಲಾ ಕೊಂದವನು ಮಹಾಬಲನೇ ಎಂದು ತಿಳಿದು ಉನ್ಮತ್ತನಂತೆ ಅವನ ಮೇಲೆ ಏರಿಬರುತ್ತಾನೆ. ಇವನೇ ಅನ್ವರ್ ಅಂತ ತಿಳಿದ ಮಹಾಬಲ ದೊಡ್ಡಪ್ಪನನ್ನು ಎಬ್ಬಿಸಿ ನಿನ್ನ ಎಲ್ಲಾ ಕತೆ ಹೇಳುತ್ತೇನೆ ಎಂದಾಗ, ಅಪ್ಪ ಹೊಸ ಸಂಸಾರದ ಕನಸ್ಸನ್ನು ಅವರ ಕಣ್ಣುಗಳಲ್ಲಿ ಬಿಚ್ಚಿಕೊಳ್ಳುತ್ತಾ ಇರಬಹುದು. ಹಾಗಾಗಿ ಬೆಳಿಗ್ಗೆ ಹೇಳು ಎಂದು ಕೇಳಿಕೊಳ್ಳುತ್ತಾನೆ. ಇಲ್ಲಿಗೆ ಅನ್ವರ್‌ನ ಪಾತ್ರ ಬದಲಾವಣೆಯ ಕತೆಯು ಮುಗಿಯುತ್ತದೆ.

ಹತ್ತನೆ ದೃಶ್ಯದಲ್ಲಿ **'ಅಂತಿಮ ತೀರ್ಪು'**. ಶ್ಯಾಮಭಟ್ಟರ ನಿವೃತ್ತ ಜೀವನದ ತೀರ್ಪು ಇದಾಗಿದೆ. ಶ್ಯಾಮಭಟ್ಟರ ಮನೆಯವರು ಕಂಡಂತಹ ಕನಸು, ಹೊಸಸಂಸಾರದ ಆಸೆ ಎಲ್ಲಕ್ಕೂ ತೆರ ಬಿದ್ದು ವಾಸ್ತವರ ಅರಿವು ಅವರಿಗಾಗುತ್ತದೆ.

ಮಂದಾಕಿನಿಗೆ ಅವನು ತನ್ನ ಅನಂತಣ್ಣನಲ್ಲ ಎಂದು ತಿಳಿದುಕೊಂಡು, ಸಂಕಟಪಟ್ಟು ಯಾಕೆ ನಮಗೆ ಮೋಸ ಮಾಡಿದೆ ಎಂದು ಕೇಳುತ್ತಾಳೆ. **"ನಿನ್ನ ಎದುರಿಗೆ ನನ್ನ ಆಳದ ಭಾವನೆಗಳ ಬಟ್ಟೆ ಬಿಚ್ಚಿ ಬೆತ್ತಲಾದೆ ಅಂತ**

**ಅನ್ನಿಸುತ್ತಾ ಇದೆ**"[೧] ಎಂದು ಅನ್ವರ್‌ನನ್ನು ನಿಂದಿಸುತ್ತಾಳೆ. ಸೀತಮ್ಮ ನಿಜ ಹೇಳು ನೀನು ನಮ್ಮ ಅನಂತನೋ ಅಲ್ಲವೋ ಎಂದು ಕೇಳುತ್ತಾಳೆ. ಇವರೆಲ್ಲರ ಮಾತಿಗೆ ಸಿಕ್ಕಿದ ಅನ್ವರ್ ಏನನ್ನೂ ಹೇಳಲಾಗದೆ ತಪ್ಪಿತಸ್ಥನಂತೆ ನಿಲ್ಲುತ್ತಾನೆ. ನೀವು ಏನು ಶಿಕ್ಷೆ ಕೊಟ್ಟರೂ ನಾನು ಅದಕ್ಕೆ ತಯಾರಾಗಿದ್ದೀನೆ. ನಾನು ನಿಮ್ಮ ಅಪರಾಧಿ ಎಂದು ಮನೆಬಿಟ್ಟು ಹೋಗುವುದಕ್ಕೆ ನಿಂತ ಅನ್ವರ್‌ನನ್ನು ಶ್ಯಾಮಭಟ್ಟರು ತಡೆದು, ಇವನನ್ನು ಮಗ ಎಂದು ಕೊಂಡು ಇಷ್ಟು ದಿವಸ ಇದ್ದೇವು. ಇನ್ನೂ ಮುಂದೆನೂ ಹೀಗೆ ತಿಳಿದು ಕೊಂಡು ಬದುಕೋದಕ್ಕೆ ಸಾಧ್ಯ ಇಲ್ಲವೇನು? ಎಂದು ಹೇಳುತ್ತಾರೆ. ಈಡೀ ನಾಟಕದ ಆಶಯವನ್ನು ಶ್ಯಾಮಭಟ್ಟರ ಈ ನಾಲ್ಕು ಮಾತುಗಳಲ್ಲಿ ನಾಟಕಕಾರರು ಹುದುಗಿಸಿಟ್ಟಿದ್ದಾರೆ.

ಆದರೂ ಅನ್ವರ್ ನಾನು ಇಲ್ಲಿ ಇರಲು ಅಸಾಧ್ಯವೆಂದು ಹೊರುಡುತ್ತಾನೆ. ಆದರೆ, ಊರಿನಲ್ಲಿ ಗಲಭೆ ಹೆಚ್ಚಾಗಿದ್ದರಿಂದ ಶ್ಯಾಮಭಟ್ಟರು ಅನ್ವರ್ ಮತ್ತು ಮಹಾಬಲ ಇಬ್ಬರನ್ನು ಈ ಮನೆಯಲ್ಲೇ ಇರಬೇಕೆಂದು ತೀರ್ಪನ್ನು ಕೊಡುತ್ತಾರೆ.

ನಾಟಕದ ಅಂತಿಮ ದೃಶ್ಯ **'ಉರಿಯುವ ಊರಿನಲ್ಲೊಂದು ಹಾಡು'** ಎಂಬ ಶೀರ್ಷಿಕೆಯೊಂದಿಗೆ ಬಂದಿದೆ.

ಊರಿನಲ್ಲಿ ಮತ್ತೆ ಗಲಭೆ ಪ್ರಾರಂಭವಾಗುತ್ತದೆ. ಅದನ್ನು ತಹಬದಿಗೆ ತರಲು ಇನ್ಸ್‌ಪೆಕ್ಟರ್ ಕಾರ್ಯ ನಿರತರಾಗಿದ್ದಾರೆ. ಕಸದ ತೊಟ್ಟಿಯ ಹತ್ತಿರ ಭಿಕ್ಷುಕನ ವೇಷದಲ್ಲಿ ಅನಂತ ನಿಂತಿದ್ದಾನೆ. ಇನ್ಸ್‌ಪೆಕ್ಟರ್ ಹೆಸರು ಕೇಳಿದರೆ ಅನಂತ ಭಟ್ ಬಿನ್ ಶ್ಯಾಮಭಟ್ಟ ! ಎಂದೂ ವಿಳಸ ಕೇಳಿದರೆ ನ್ಯೂಯಾರ್ಕ್ ಎಂದು ಹೇಳಿದಾಗ ಇವನು ಹುಚ್ಚನೆಂದು ಭಾವಿಸುತ್ತಾರೆ.

ನಾನೊಂದು ಹಾಡು ಹೇಳಲಾ ಎಂದು ಇನ್ಸ್‌ಪೆಕ್ಟರ್‌ನನ್ನು ಕೇಳಿ ಹಾಡಲು ಪ್ರಾರಂಭಿಸುತ್ತಾನೆ.

ಬಂತೈ! ಬಂತೈ! ಇದೆ! ಇದೆ! ಬಂತೈ!!

ಗಿಡಗಿಡದಿಂ – ಚೆಲು ಗೊಂಚಲು ಮಿಂಚಲು –

ಮಿಡಿಯನು ಹಣ್ಣನು, ಉದುರಿಸಿ ಕೆದರಿಸಿ.

.........................................................

.....................................................

ತೆಂಕಣಗಾಳಿಯು ಕೊಂಕಣ ಸೀಮೆಗೆ

ಬಂತೈ! ಬಂತೈ! ಬಂತೈ! ಬಂತೈ!!

---

೧: ಚೂ.ಕ. (ಪು–೬೧)

ಉರಿಯುವ ಊರಿನಲ್ಲೊಂದು ಹಾಡು ಈ ರೀತಿ ಕೇಳು ಬಂದಿತು. ಹಿಂದೂ-ಮುಸ್ಲಿಂ ಎಂಬ ಕೋಮುವಾದಕ್ಕೆ ಸಿಕ್ಕಿ ನರಳುತ್ತಿರುವ ದೇಶಕ್ಕೆ ಹೊಸ ಪರಿಭಾಷೆಯನ್ನು ನಾಟಕಕಾರರು ತರಲು ಪ್ರಯತ್ನಿಸಿದ್ದಾರೆ. ನಂಬಿಕೆ ಸಿದ್ಧಾಂತದ ಮೇಲೆ ನಿಂತಿರುವ ಈ ನಾಟಕವು ಭಾರತದ ಭದ್ರ ಬುನಾದಿಯ ಸೂಚನೆಯನ್ನು ಕೊಡುವಂತಿದೆ.

* * *

## ಅಧ್ಯಾಯ – ೫

# ಮೂರು ನಾಟಕಗಳಲ್ಲಿನ 'ಪಾತ್ರ ಚಿತ್ರಣ' ಮತ್ತು 'ತಂತ್ರ'ಗಳ ಅಳವಡಿಕೆ

**'ಚೂರಿ ಕಟ್ಟೆ ಅರ್ಥಾತ್ ಕಲ್ಯಾಣಪುರ'** – ನಾಟಕದಲ್ಲಿ ಕಂಡು ಬರುವ 'ಪಾತ್ರ ಚಿತ್ರಣ' ಮತ್ತು 'ತಂತ್ರ'ಗಳು

**ಪಾತ್ರ ಚಿತ್ರಣ:**

ಒಂದು ನಾಟಕದಲ್ಲಿ ಅಂತಃಸತ್ವವೆಂದರೆ, ಆ ನಾಟಕದ ಪಾತ್ರಗಳು ನಾಟಕಕ್ಕೆ ಜೀವ ತುಂಬುವಂತಹ ಶಕ್ತಿ, ಆ ನಾಟಕದ ಪಾತ್ರಗಳಾಗಿರುತ್ತದೆ. ನಾಟಕಕಾರನ ದೃಷ್ಟಿ, ಧೋರಣೆ, ಮನೋಧರ್ಮಗಳನ್ನು ಪಾತ್ರಗಳು ತಮ್ಮ ವರ್ತನೆಯ ಮೂಲಕ ಅಭಿವ್ಯಕ್ತಿಸುತ್ತವೆ. ಕೆಲವೊಮ್ಮೆ ಪಾತ್ರಗಳು ನಾಟಕಕಾರನ ನಿಯಂತ್ರಣವನ್ನು ಮೀರಿ, ಸ್ವತಂತ್ರವಾಗಿ, ಸಹಜವಾಗಿಯೇ ಬೆಳೆಯಬಲ್ಲದು. ಒಟ್ಟಿನಲ್ಲಿ ಹೇಳುವುದಾದರೆ ಪಾತ್ರಗಳು ನಾಟಕಾರರ ಪ್ರತಿಭೆಯ ಸಂಕೇತವಾಗಿರುತ್ತದೆ.

ಈ ನಾಟಕದಲ್ಲಿ ಬರುವ ಪಾತ್ರಗಳು ಕಡಿಮೆಯಾದರೂ, ಅದು ನಿರ್ವಹಿಸುವ ಕಾರ್ಯ ಪ್ರಮುಖವಾದದ್ದು. ಅನಾದಿಕಾಲದಿಂದಲೂ ಇರುವಂತಹ ಹಿಂದೂ–ಮುಸ್ಲಿಂ ಎಂಬ ಕೋಮುವಾದದ ಹಿನ್ನಲೆಯಲ್ಲಿಯೇ ನಾಟಕ ಕಂಡುಬಂದರೂ, ಇಲ್ಲಿನ ಹೆಚ್ಚಿನ ಪಾತ್ರಗಳು ಕೋಮುವಾದಕ್ಕೆ ತಿರುಗಿನಿಂತ, ಅಂದರೆ ಕೋಮುಸೌಹಾರ್ದತೆಯನ್ನೇ ಹೇಳಲು ಹೊರಟಿರುವ ಪಾತ್ರಗಳು ಈ ನಾಟಕದಲ್ಲಿದೆ.

ನಾಟಕದುದಕ್ಕೂ ಕಂಡು ಬರುವಂತಹ ಏಕೈಕ ಮುಸ್ಲಿಂ ಪಾತ್ರ ಅನ್ವರ್. ಅನ್ವರ್ ನಾಟಕದ ಕೇಂದ್ರ ಬಿಂದು. ಇಡೀ ನಾಟಕದ ಆಶಯವನ್ನು ಇವನ ಪಾತ್ರದಲ್ಲಿ ಗುರುತಿಸಹುಬಹುದು. ಮತ್ತು ಇವನ ಪಾತ್ರದಿಂದಲೇ ನಾಟಕಾರರು ಸಮಾಜಕ್ಕೆ ಹೊಸದೊಂದು ಸಂದೇಶ ಕೊಡಲು ಮುಂದಾಗಿದ್ದಾರೆ.

ಹಿಂದೂ ಹುಡುಗಿಯನ್ನು ಪ್ರೀತಿಸಿ ಅವಳನ್ನು ಓಡಿಸಿಕೊಂಡು ಹೋಗಿದ್ದನು. ಅದಕ್ಕಾಗಿ ಅವನು ಘೋರ ಶಿಕ್ಷೆಯನ್ನು ಅನುಭವಿಸಿದ್ದ. ಪ್ರೀತಿಸಿದ ಹುಡುಗಿಯನ್ನು ಕೊಂದಿದ್ದರು ಮತ್ತು ತನ್ನ ಇಡೀ ಪರಿವಾರವನ್ನೇ ನಾಶಮಾಡಿದ್ದು ಅಲ್ಲದೆ ಅನ್ವರ್‌ನನ್ನು ಕೊಲ್ಲಲು ಮುಂದಾಗಿದ್ದರು. ಒಂದು ಕಡೆ ಪೊಲೀಸ್ ಅವನನ್ನು ಹುಡುಕುತ್ತಿದ್ದರೆ ಮತ್ತೊಂದುಕಡೆ ಮಹಾಬಲನ ಕಡೆಯವರು ಹುಡುಕುತ್ತಿದ್ದರು. ಇಂತಹ ಸಂದರ್ಭದಲ್ಲಿ ಅನಂತನ ಸಲಹೆಯ ಮೇರೆಗೆ ಶ್ಯಾಮಭಟ್ಟರ ಮನೆಯ ಆಶ್ರಯ ಪಡೆಯುವಲ್ಲಿ ಯಶಸ್ವಿಯಾಗುತ್ತಾನೆ. ಆಶ್ರಯಪಡೆಯಲು ಅವನು ಹೇಳಿದ್ದು ತಾನೂ ಹಿಂದೂ ಧರ್ಮಕ್ಕೆ ಸೇರಿದವನೆಂದು ಹೇಳಿದರೂ ಇಸ್ಲಾಂ ಧರ್ಮದ ನಿಷ್ಠೆಯನ್ನು ಕಾಪಾಡಿಕೊಂಡೇ ಬರುತ್ತಾನೆ. ಪರಿವಾರದವರೆಲ್ಲಾ ಆತ್ಮೀಯನೆಂಬಂತೆ ಕಂಡಾಗ ಮುಜುಗರವನ್ನು ಪಟ್ಟುಕೊಳ್ಳುತ್ತಾನೆ. ಮಹಾಬಲನು ಇವನ ಮೇಲೆ ಅನುಮಾನ ಪಟ್ಟುಕೇಳುವ ಪ್ರಶ್ನೆಗೆಲ್ಲ ಬುದ್ಧಿವಂತಿಕೆಯಿಂದ ಉತ್ತರ ಕೊಟ್ಟು, ವಿಚಾರ, ಮತ್ತು

ಪ್ರಜ್ಞಾವಂತ ಯುವಕನಾಗಿ ಕಂಡು ಬರುತ್ತಾನೆ. ಮಂದಾಕಿನಿಯು ಅನ್ವರ್‌ನಲ್ಲೇ ತನ್ನ ಅಣ್ಣ ಅನಂತನನ್ನು ಕಾಣುವಂತಹ ವ್ಯಕ್ತಿತ್ವ ಅವನದಾಗಿಸಿಕೊಂಡಿರುತ್ತಾನೆ. ಅನ್ವರ್‌ನ ಪರವಾಗಿ ಶ್ಯಾಮಭಟ್ಟ ಮತ್ತು ವಿರುದ್ಧವಾಗಿ ಮಹಾಬಲನು ಮಾತಾಡುವಾಗ ಇದರ ಪರಿವೇ ಇಲ್ಲದಂತೆ ಅನ್ವರ್‌ಇರುತ್ತಾನೆ. ಅವನಿಗೆ ತಿಳಿದಿರುವುದು ಅನಂತನು ಹೇಳಿದ್ದನ್ನು ನಡೆಸಿಕೊಂಡು ಹೋಗುವುದು ಅಷ್ಟೇ ಆಗಿರುತ್ತದೆ. ಅನಂತನು ಅನ್ವರ್‌ನಿಗೆ ನೀನು ಮನೆಯಲ್ಲಿ ನಾನೇ ಅನಂತ ಅಂತ ಹೇಳು ಎಂದಾಗ ಮನೆಯವರ ಭಾವನೆಗೆ ಮೋಸ ಮಾಡಲು ಹಿಂಜರಿಯುತ್ತಾನೆ. ಕೊನೆಗೆ ಜಾತಿ, ಧರ್ಮ, ಆಚಾರ ಎಲ್ಲದಕ್ಕಿಂತ ಬದುಕು ದೊಡ್ಡದೆಂಬ ನಿಲುವಿಗೆ ಬರುತ್ತಾನೆ.

**"ಬದುಕು ಅನ್ನುವುದೇ ಇಲ್ಲದೆ ಹೋದರೆ ಯಾವ ದೊಡ್ಡ ಸತ್ಯವೂ ಕೂಡ ಇರುವುದಿಲ್ಲ ಅನ್ನುವ ಕಾರಣಕ್ಕಾಗಿಯೇ ನಿನ್ನ ಉಪಾಯಕ್ಕೆ ನಾನು ಒಪ್ಪುತ್ತೇನೆ"**[೧] ಎಂದು ಅನ್ವರ್‌ನಿಂದ ಅನಂತನಾಗಲು ಒಪ್ಪುತ್ತಾನೆ. ಆದರೆ, ಅನಂತ ಎಂದು ಹೇಳಿಕೊಂಡು ಅವನ ಪಾತ್ರ ನಿರ್ವಹಿಸುವಲ್ಲಿ ಸ್ವಲ್ಪ ಮಟ್ಟಿಗೆ ಯಶಸ್ವಿ ಆದರೂ ಕೊನೆಯಲ್ಲಿ ವಿಫಲನಾಗುತ್ತಾನೆ. ಅನ್ವರ್‌ನೇ ಅನಂತ ಎಂದು ತಿಳಿದು ಮನೆಯವರೆಲ್ಲರೂ ಭಾವುಕರಾದಾಗ ನಿರ್ಭಾವುಕನಂತೆ ನಿಲ್ಲುತ್ತಾನೆ. ಮನೆಯ ಮಗನಾಗಿ ಎಲ್ಲರೊಂದಿಗೆ ಇದ್ದರೂ, ಎಲ್ಲರಿಗಿಂತಲೂ ಭಿನ್ನವಾದ ವ್ಯಕ್ತಿತ್ವದಿಂದ ಗಮನಸೆಳೆಯುತ್ತಾನೆ.

ಶ್ಯಾಮಭಟ್ಟರ ಮನೆಗೆ ಬಂದಂತಹ ಪುರೋಹಿತರಾದ ಚಕ್ರಪಾಣಿ ಶಾಸ್ತ್ರಿ, ಮನೆಯ ಡ್ರೈವರ್ ಆಗಿದ್ದ ಕುಟ್ಟಿ ಮತ್ತು ಭಟ್ಟರ ಚಿಕ್ಕಮ್ಮರಾದ ಭವಾನಮ್ಮರ ಮುಂದೆ ಅನಂತಪಾತ್ರವನ್ನು ನಿರ್ವಹಿಸಲಾಗದೆ ಗೊಂದಲಕ್ಕೆ ಸಿಲುಕುತ್ತಾನೆ. ಚಕ್ರಪಾಣಿ ಶಾಸ್ತ್ರಿಗಳಿಗೆ ನಮಸ್ಕಾರ ಮಾಡಲು ಎಡಗೈ ಮುಂದಾದಾಗ ಭಟ್ಟರು ಬಲಗೈಯಲ್ಲಿ ನಮಸ್ಕಾರ ಮಾಡಬೇಕು ಎಂದಾಗ ಪಜೀತಿಗೆ ಸಿಲುಕುತ್ತಾನೆ. ಭಟ್ಟರ ಮಗ ಎಂದು ಹೇಳಿಕೊಂಡರೂ ಅವನ ಅಂತಃಸತ್ವ ಇಸ್ಲಾಂ ಧರ್ಮದಲ್ಲಿ ಒಂದಾಗಿರುತ್ತದೆ.

ಅನಂತರದಲ್ಲಿ ಚಕ್ರಪಾಣಿ ಶಾಸ್ತ್ರಿಗಳಿಗೆ ನಮಸ್ಕಾರ ಮಾಡುವಾಗ ಬಲಗೈಯನ್ನೇ ಮುಂದೆಮಾಡಿ ನಮಸ್ಕರಿಸುತ್ತಾನೆ. ಅನಿವಾರ್ಯದಿಂದಲೇ ಹಿಂದೂ ಧರ್ಮಕ್ಕೆ ಬದ್ದನಾಗುತ್ತಾನೆ ಅನ್ವರ್. ಅನಂತನ ಪಾತ್ರ ನಿರ್ವಹಿಸುತ್ತಾ ತಾನು ಯಾರು ಎಂಬುದನ್ನೆ ಮರೆತ ಅನ್ವರ್ ತನ್ನಲ್ಲಿ ತಾನೇ ಹೀಗೆ ಕೇಳಿಕೊಳ್ಳುತ್ತಾನೆ.

"ನಾನು ಯಾರು?......

ಯಾವ ಊರು?......

ನಾನು ಅಂದರೆ ನಾನೇ?......

ಅಥವಾ ನಿಮ್ ಕಣ್ಣಲ್ಲಿ ಈಜಾಡೋ ಮೀನೆ?......

ನಾನು ಯಾರು?...... ನಾನು ಯಾರು?......

ಎಂದು ತನ್ನಲ್ಲಿಯೇ ಪ್ರಶ್ನೆಹಾಕಿಕೊಳ್ಳುತ್ತಾನೆ. ಷೇಕ್ಸ್‌ಪಿಯರ್ ಹೇಳಿದ ಹಾಗೆ

---

೧: ಚೂ.ಕ. (ಪು-೩೫)

**"ಆಲ್‌ದ ವರ್ಲ್ಡ್ ಈಸ್ ಎಸ್ಟೇಜ್"** ಎಂಬ ನಿಲುವಿಗೆ ಬಂದು ಜೀವನವೇ ನಾಟಕ ಎಂದು ಸುಮ್ಮನಾಗುತ್ತಾನೆ.

ಮಂದಾಕಿನಿ ತನ್ನ ಅನಂತಣ್ಣ ಎಂದು ಅವನೊಂದಿಗೆ ಚಿಕ್ಕವಯಸ್ಸಿನ ನೆನಪನ್ನು ಮೆಲುಕುಹಾಕುವಾಗ, ಅನ್ವರ್‌ನಿಗೂ ತನಗೆ ತಿಳಿದ ಸಂಗತಿಗಳನ್ನು ಹೇಳಿಕೊಳ್ಳುವನಷ್ಟೇ. ಮಂದಾಕಿನಿ ಪ್ರೀತಿಯಿಂದ ಬಂದು ಆಲಂಗಿಸಿದಾಗ ದೂರಸರಿಯುತ್ತಾನೆ. ಅನಂತ ಎಂದು ಹೇಳಿಕೊಂಡರೂ, ಅನ್ವರ್ ತನ್ನ ತನವನ್ನು ಬಿಟ್ಟುಕೊಡಲು ತಯಾರಾಗುವುದಿಲ್ಲ. ಪ್ರೀತಿಸಿದ ಹುಡುಗಿಯನ್ನು ಕಳೆದುಕೊಂಡು ಅವಳಿಗಾಗಿ ಸಂಕಟಪಟ್ಟುಕೊಳ್ಳುವಾಗ ನಿಜವಾದ 'ಪ್ರೇಮಿ'ಯಂತೆ ಕಾಣುತ್ತಾನೆ. ಮಹಾಬಲನ ಹಿಂದಿನ ಕಥೆಯನ್ನು ಕೇಳಿ ಅವನ ಮೇಲೆ ಸಹಾನುಭೂತಿಯಿಂದಲೇ ಅವನನ್ನು ಸಂತೈಸುತ್ತಾನೆ. **"ಎಲ್ಲರ ಕಥೆಯೂ ಅಷ್ಟೇ. ಹೇಳಿದರೆ ನಂಬೋದು ಕಷ್ಟ"**[೧] ಎಂದು ಅವನ ಸ್ನೇಹಿತನಂತೆ ನೆರವಾಗುತ್ತಾನೆ. ಅಷ್ಟರಲ್ಲಿ ತನ್ನ ಪರಿವಾರದವರನ್ನೆಲ್ಲಾ ನಾಶಮಾಡಿದ್ದು ಮಹಾಬಲನೇ ಎಂದು ತಿಳಿದ ತಕ್ಷಣ ಅವನನ್ನು ಸಾಯಿಸಲು ಮುಂದಾಗುತ್ತಾನೆ. ತಂದೆ-ತಾಯಿ, ಪ್ರೀತಿಸಿದ ಹುಡುಗಿ ಎಲ್ಲರನ್ನು ಕಳೆದು ಕೊಂಡು ಏಕಾಂಗಿಯಾಗಿದ್ದ ಅನ್ವರ್ ಅದಕ್ಕೆ ಪ್ರತೀಕಾರ ತೀರಿಸಿಕೊಳ್ಳಲು ಮುಂದಾಗುತ್ತಾನೆ. ಆಗ ತನಗೆ ಆಶ್ರಯವಿತ್ತ ಮನೆ, ಮತ್ತು ತಾನು ಆ ಮನೆಯ ಮಗನಂತಿದ್ದೆ ಎಂಬುದನ್ನು ಮರೆತು ತನ್ನ ನಿಜರೂಪ ವನ್ನು ತೋರಿಸುತ್ತಾನೆ. ಮಹಾಬಲನು ತನ್ನ ದೊಡ್ಡಪ್ಪನಿಗೆ ನಿಜವಾದ ಸಂಗತಿ ತಿಳಿಸುತ್ತೇನೆಂದಾಗ ಅನ್ವರ್

**"ಅಪ್ಪ ಮಲಗಿದ್ದಾರೆ...... ಹೊಸ ಸಂಸಾರದ ಕನಸು ಈಗ ಅವರ ಕಣ್ಣುಗಳಲ್ಲಿ ಬಿಚ್ಚಿಕೊಳ್ಳಲೂ ಇರುಬಹುದು..... ಹಾಗಾಗಿ ಇದನ್ನೆಲ್ಲಾ ಅವರಿಗೆ ಹೇಳೋದಕ್ಕೆ ಬೆಳಗಾಗೋ ತನಕ ಕಾಯತೀಯಾ? ಪ್ಲೀಸ್"**[೨] ಎಂದು ಹೇಳುವಾಗ ಮಮತೆಯನ್ನು ತೋರಿಸಿದ ಪರಿವಾರಕ್ಕೆ ವಾತ್ಸಲ್ಯದ ಪುತ್ರನಾಗಿ ಕಾಣುತ್ತಾನೆ.

ಅನ್ವರ್ ಅನಂತನಲ್ಲಾ ಎಂಬ ಸಂಗತಿ ಎಲ್ಲರಿಗೂ ತಿಳಿದ ಮೇಲೆ ತಾನು ಹಾಗೆ ಸುಳ್ಳು ಹೇಳಲು ನಿಮ್ಮ ಮಗ ಅನಂತನೇ ಕಾರಣ ಎಂಬ ಸಂಗತಿಯನ್ನೂ ಸಹ ಹೇಳದೆ, ಅವರ ಪ್ರಶ್ನೆಗಳಿಗೂ ಉತ್ತರ ಕೊಡಲಾಗದೆ ತಡವರಿಸುತ್ತಾ ನಿಲ್ಲುತ್ತಾನೆ. ತಾನು ಮಾಡಿದ್ದು ತಪ್ಪು ನೀವು ಏನು ಶಿಕ್ಷೆ ಕೊಟ್ಟರು ಅದಕ್ಕೆ ತಯಾರಾಗಿದ್ದೇನೆ ಎಂದು ಅಪರಾಧಿ ಸ್ಥಾನದಲ್ಲಿ ತಾನೇ ನಿಲ್ಲುತ್ತಾನೆ. ಶ್ಯಾಮಭಟ್ಟರು ಮನೆ ಮಗ ಎಂದು ಇದ್ದ ಅನ್ವರ್‌ನನ್ನು ಇನ್ನೂ ಮುಂದೆ ಹಾಗೆ ಇರಲಿ ಎಂದಾಗ, ಅನ್ವರ್‌ನ ಅಂತಃಸತ್ವದ ಮಾತು ಹೊರಗೆ ಬರುತ್ತದೆ. **"ಹಿಂದೂ-ಮುಸ್ಲಿಮರು ಅಣ್ಣತಮ್ಮಂದಿರ ತರ ಇರೋದಕ್ಕೆ ನನಗೂ ಆಶೆ ಇದೆ. ಆದರೆ ಸ್ವತಃ ಒಬ್ಬ ಹಿಂದೂವಿನ ಮನೆಯಲ್ಲಿ, ಅದೂ ಆ ಮನೆಯ ಮಗ ಅಂತ ನಂಬಿಕೊಂಡು ಇರೋದಕ್ಕೆ ಸದ್ಯಕ್ಕಂತೂ ನನಗೆ ಸಾಧ್ಯವಿಲ್ಲ"**[೩] ಎನ್ನುವಾಗ ಅವನು ಹಿಂದೂ ಧರ್ಮಕ್ಕೆ ಹೊಂದಿಕೊಳ್ಳಲಾಗದವನಂತೆ ಕಂಡುಬರದಿದ್ದರೂ. ಇಸ್ಲಾಂ ಧರ್ಮದ ನಿಷ್ಠೆಯನ್ನು ಕಾಣಬಹುದು.

ಕೊನೆಗೆ ಅನಿವಾರ್ಯದಿಂದಲೇ ಭಟ್ಟರ ಪರಿವಾರದೊಂದಿಗೆ ಇರಲು ಒಪ್ಪುತ್ತಾನೆ. ಅನ್ವರ್ ಪಾತ್ರದ ಚಿತ್ರಣ ಮುಖಾಂತರ ಲೇಖಕರು ಹೊಸ ವಿಷಯವನ್ನು ಜನರಿಗೆ ಹೇಳುವ ಪ್ರಯತ್ನ ಮಾಡಿದ್ದಾರೆ. ಜನರಿಗೆ, ಭಿನ್ನ

---

೧: ಚೂ.ಕ.ಅ.ಕ. (ಪು-೫೭)

೨: ಚೂ.ಕ.ಅ.ಕ. (ಪುಟ-೬೦)

೩: ಚೂ.ಕ.ಅ.ಕ. (ಪುಟ-೬೪)

ಆಯಾಮದಲ್ಲಿ ಎಲ್ಲರೂ ಒಂದೇ. ಯಾವ ಧರ್ಮ ದೊಡ್ಡದು ಅಲ್ಲ, ಯಾವ ಧರ್ಮ ಸಣ್ಣದು ಅಲ್ಲ. ಧರ್ಮಕ್ಕಿಂತ ಮನುಷ್ಯತ್ವದ ಧರ್ಮ ದೊಡ್ಡದು ಎಂದು ನಿರೂಪಿಸಿದ್ದಾರೆ. ಈ ನಾಟಕದಲ್ಲಿ ಅನ್ವರ್‌ನನ್ನು ಅನಂತನನ್ನಾಗಿ ಪರಿವರ್ತಿಸುವ ಪಾತ್ರವೆಂದರೆ ಸ್ವತಃ 'ಅನಂತ' ಶ್ಯಾಮಭಟ್ಟರ ಮೊದಲ ಮಗ. ತನ್ನ ಜಾಗವನ್ನು ಭರ್ತಿಮಾಡಲು, ಅಥವಾ ನಾಟಕಕಾರರ ಪ್ರಕಾರ ಹೊಸದೊಂದು ಚಿಂತನೆಯನ್ನು ಸಮಾಜಕ್ಕೆ ಮೂಡಿಸಲು ಅನಂತ ಪಾತ್ರವನ್ನು ತಂದಿದ್ದಾರೆ. ನಾಟಕದಲ್ಲಿ ನೆಪ ಮಾತ್ರಕ್ಕೆ ಬರುವಂತಹ ಪಾತ್ರವಿದು. ಅನ್ವರ್‌ನಿಗೆ ಬಿಟ್ಟರೆ ಬೇರೆಯವರಿಗೂ ಗೋಚರಿಸದ ಪಾತ್ರ ಚಿತ್ರಣ. ಭಿಕ್ಷುಕನ ವೇಷದಲ್ಲಿ ಅನ್ವರ್‌ನಿಗೆ ಸಹಾಯ ಮಾಡುತ್ತಿರುತ್ತಾನೆ. ಅನಂತನ ಮುಖಾಂತರ ಆಧುನಿಕ ಪರಿಭಾಷೆಯ ಪರಿಚಯವನ್ನು ನಾಟಕಕಾರರು ಮಾಡಿದ್ದಾರೆ. ಅನ್ವರ್‌ನಿಗೆ ತನ್ನ ಮನೆಯಲ್ಲೇ ಉಳಿಯಲು ಜಾಗ ಕೊಡಿಸುತ್ತಾನೆ. ಅನ್ವರ್‌ನಿಗೆ ಅನಂತನ ಅವಶ್ಯಕತೆ ಇದ್ದಾಗಲೆಲ್ಲಾ ಸಹಾಯ ಮಾಡುತ್ತಾನೆ. ಅನಂತ ಹೇಳುವಂತೆ **'ಪೊಲಿಟಿಕಲ್ ಆಫ್ ಐಡೆಂಟಿಟಿ'** ಅಂದರೆ, ಅನ್ವರ್ ತನ್ ಉಳಿವಿಗಾಗಿ ಹೋರಾಡ ಬೇಕೆಂದರೆ ತಾನು ಹಿಂದೂ ಎಂದು ಹೇಳಿಕೊಳ್ಳಬೇಕು ಇಲ್ಲವೇ ಶ್ಯಾಮಭಟ್ಟರ ಮಗನೆಂದು ಸುಳ್ಳುಹೇಳಬೇಕು. ಹಿಂದೂ ಮುಸ್ಲಿಂ ಎನ್ನುವ ಕೋಮುಗಲಭೆಯನ್ನು ದುರುಪಯೋಗ ಪಡಿಸಿಕೊಳ್ಳುತ್ತಿರುವವರು ರಾಜಕೀಯದವರು. ಸಮಾಜದಲ್ಲಿ ಬದುಕಲು ರಾಜಕೀಯ ಛಾಯೆಯೇ ಹೆಚ್ಚಾಗಿ ಕಂಡುಬರುತ್ತದೆ. ಜಾತಿ, ಧರ್ಮ, ರಾಜಕೀಯದ ನಡುವೆ ವ್ಯಕ್ತಿಗಳು ತಮ್ಮ ವ್ಯಕ್ತಿತ್ವ ರೂಪಿಸಲು ಮಾಡುವ ಸಂಘರ್ಷವನ್ನು ನಾಟಕಕಾರರು ಅನಂತನ ಮುಖಾಂತರ ಚಿತ್ರಿಸಿದ್ದಾರೆ.

ಅನಂತನ ಮುಖ್ಯ ಉದ್ದೇಶ ಅನ್ವರ್‌ನನ್ನು ಅನಂತ ಎಂದು ಪರಿವರ್ತಿಸಿ ಅವನಿಗೊಂದು ನೆಮ್ಮದಿ ಬದುಕನ್ನು ಕೊಡಿಸುವುದು ಮತ್ತು ತನ್ನ ಪರಿವಾರಕ್ಕೆ ಕಳೆದುಕೊಂಡ ಮಗನನ್ನು ಮರಳಿ ಹಿಂದಿರುಗಿಸುವುದು ಎಂದು ಕಂಡರೂ, ಲೇಖಕರು ಅನಂತನ ಪಾತ್ರವನ್ನು ಇಟ್ಟುಕೊಂಡು ಹೊಸ ಕನಸನ್ನು ಕಟ್ಟಿದ್ದಾರೆ. ಅಂದರೆ ಸ್ವತಃ ಅನಂತನಿಗೆ ಅನ್ವರ್‌ನನ್ನು ಅನಂತನನ್ನಾಗಿ ಮಾರ್ಪಾಡಿಸುವುದು ಇದು ಹೊರನೋಟಕ್ಕೆ ಕಂಡರೂ ಆಂತರ್ಯದಲ್ಲಿ ಒಬ್ಬ ಮುಸ್ಲಿಂ ಬಂಧುವನ್ನು ಹಿಂದೂಧರ್ಮಿಯನ್ನಾಗಿ ಪರಿವರ್ತಿಸುವ ಕ್ರಮ, ಇದು ಸಮಾಜದಲ್ಲಿ ಕ್ರಾಂತಿಕಾರರ ವಿಷಯವಾಗಬೇಕೆಂಬ ಹಂಬಲ ನಾಟಕಕಾರರದ್ದು. ಒಬ್ಬ ಮುಸ್ಲಿಂನನ್ನು ಹಿಂದೂ ಎಂದು ಒಪ್ಪಿಕೊಂಡರೆ, ಅವರು ನಮ್ಮ-ಬಂಧು-ಬಾಂಧವರೆಂದು ಕೊಂಡರೆ, ಇನ್ನೆಲ್ಲಿ ಕೋಮುಗಲಭೆ ಎಂಬ ಹೊಸ ಆಶಯವನ್ನು ಅನಂತನ ಪಾತ್ರದಿಂದ ಲೇಖಕರು ಹೇಳಲು ಹೊರಟಿದ್ದಾರೆ.

ಅನ್ವರ್‌ನಿಗೆ ತನ್ನ ಪೂರ್ವದ ಕಥೆಯನ್ನು ಹೇಳುವಾಗ ಪರಿಪೂರ್ಣ ವ್ಯಕ್ತಿತ್ವವನ್ನು ಹೊಂದಿದವನಂತೆ ಅನಂತ ಕಂಡು ಬರುತ್ತಾನೆ. ವಿದೇಶಿ ಹೆಣ್ಣೊಬ್ಬಳನ್ನು ಮದುವೆ ಆಗಿದ್ದಂತಹ ಅನಂತ ವಿಶಾಲ ದೃಷ್ಟಿ ಉಳ್ಳವನಾಗಿ ಕಾಣುತ್ತಾನೆ. ಅನ್ವರ್‌ನಿಗೆ ಆಧುನಿಕತೆಯ ಒಂದು ಪರಿಚಯವನ್ನು ಮಾಡಿಸುತ್ತಾನೆ.

**"ನಾನಿನ್ನೂ ನ್ಯೂಯಾರ್ಕಿನ ತನ್ನ ಫ್ಲಾಟಿನಲ್ಲೇ ಇದ್ದೇನೆ. ನಾನು ಮಾತಾಡುತ್ತಿರುವುದು ಹೊಸ ಭಾಷೆ..... ಕಂಪ್ಯೂಟರಿನ ಭಾಷೆ..... ಈ ಭಾಷೆಯಲ್ಲಿ ಹೇಳುವುದಾದರೆ ನನ್ನದು ಈಗ ಭ್ರಾಮಕ ವಾಸ್ತವ-ವರ್ಚುವಲ್ ರಿಯಾಲಿಟಿ- ಒಂದು ನಿಜವಾದ ಸ್ಥಳಕ್ಕೂ ಒಂದು ವೆಬ್‌ಸೈಟಿಗೂ ನಡುವೆ ಇರೋ ವ್ಯತ್ಯಾಸ"**[೧]

---

೧: ಚೂ.ಕ. (ಪುಟ-೩೩)

ಸಮಾಜವೂ ಆಧುನಿಕತೆಯ ಆವಿಷ್ಕಾರದಲ್ಲಿ ಮುಂದೆಸಾಗುತ್ತಿದ್ದರೆ, ಇನ್ನೊಂದು ಕಡೆ ನಡೆಯುತ್ತಿದ್ದಂತಹ ಹಿಂದೂ-ಮುಸ್ಲಿಂ ಎಂಬ ಕೋಮುಗಲಭೆಯ ವಿಡಂಬನೆಯನ್ನು ಅನಂತನ ಪಾತ್ರದಿಂದ ತಿಳಿಯುತ್ತದೆ.

**"ಈ ಪ್ರಪಂಚದ ಎಲ್ಲಾ ಸಂಬಂಧಗಳೂ ನಿಂತಿರುವುದು ನಂಬಿಕೆಯ ಮೇಲೆ ಹೊರತು ಸತ್ಯದ ಮೇಲಲ್ಲ"[೧]** ಎಂಬ ಹೊಸ ವಿಚಾರವನ್ನು ಈ ನಾಟಕದಲ್ಲಿ ಅನಂತನ ಪಾತ್ರದ ಮುಖಾಂತರ ತಂದಿದ್ದಾರೆ. ಹೀಗೆ ಅನ್ವರ್‌ನ್ನನ್ನು ಅನಂತನನ್ನಾಗಿ ಪರಿವರ್ತಿಸಲು ಅನಂತ ಯಶಸ್ವಿಯಾಗುತ್ತಾನೆ.

**'ಮನುಷ್ಯನು ತನ್ನ ಕುಲದ ಗುರುತು ಅನ್ನೋದೊಂದು ಅವನದೇಹದಲ್ಲೇ ಕೆತ್ತಿಕೊಂಡು ಇರುತ್ತದೆ ಅಂತ ನೀವು ತಿಳಕೊಂಡಿದ್ದೀರಿ. ಆದರೆ, ನನ್ನ ಅನುಭವದಿಂದ ಅದು ಸುಳ್ಳು ಎಂದು ತಿಳಿದುಕೊಂಡಿದ್ದೀನಿ. ಕುಲ, ಜಾತಿ, ಜನಾಂಗ ಇವೆಲ್ಲಾ ಅಳಿಸಲಿಕ್ಕಾಗದಂಥ ಹಣೆಬರಹ ಅಲ್ಲ ಅಂತ ನನಗೆ ಗೊತ್ತಾಗಿದೆ. ಈ ಇಪ್ಪತ್ತೊಂದನೆಯ ಶತಮಾನದಲ್ಲಿ ಈ ಕುಲ-ಜನಾಂಗ-ದೇಶ-ಭಾಷೆ-ಲಿಂಗ ಇವೆಲ್ಲಾ- ಹುಟ್ಟುತ್ತಲೇ ಬಂದಿರೋ ಚಹರೆ ಪಟ್ಟಿ ಅಲ್ಲ; ಅದು ಕಲ್ಪನೆಯಿಂದ ಕಟ್ಟಿಕೊಳ್ಳೋ ಆವರಣ ಮಾತ್ರ"[೨]** ಎಂದು ಅನಂತ ತನ್ನ ತಂದೆಗೆ ಬರೆದಿದ್ದನು. ಈ ಪಾತ್ರದ ಮುಖಾಂತರ ಕುವೆಂಪು ಅವರ 'ವಿಶ್ವಮಾನವ' ತತ್ತ್ವವನ್ನು ಅನಂತನಲ್ಲಿ ಕಾಣಬಹುದು. ಸಮಾಜ ಬದಲಾವಣೆಯ ಹರಿಕಾರನಂತೆ ಅನಂತನ ಪಾತ್ರ ಚಿತ್ರಣವಾಗಿವೆ.

ನಾಟಕದ ಇನ್ನೊಂದು ಮುಖ್ಯಪಾತ್ರವೆಂದರೆ ಶ್ಯಾಮಭಟ್. ನಿವೃತ್ತ ನ್ಯಾಯಾಧೀಶರು ಮತ್ತು ಮುಂದೊಂದು ದಿನ ಸಮಾಜದಲ್ಲಿ ನಾಗರಿಕ ಪ್ರಜ್ಞೆ ಜಾಗೃತವಾಗುತ್ತದೆಂಬ ಆದರ್ಶವನ್ನು ಉಳ್ಳ ಒಬ್ಬ ಆದರ್ಶವಾದಿಯಾಗಿ ಕಾಣುತ್ತಾರೆ. ಮಹಾಬಲ ಮತ್ತು ಅವರ ಸಂಘದವರ ಕಾರ್ಯಗಳು ಮತ್ತು ಉದ್ದೇಶಗಳನ್ನು ಕುರಿತು ಟೀಕೆ ಮಾಡುತ್ತಿರುತ್ತಾರೆ.

ಶ್ಯಾಮಭಟ್ಟರು ಮಹಾಬಲನಿಗೆ ಮತ್ತು ಅವನ ಸಂಘದವರಿಗೆ ಪೂರ್ವಗ್ರಹವನ್ನು ಬಿಟ್ಟು ತಮ್ಮ ಸ್ವಂತ ಬುದ್ಧಿಯನ್ನು ಉಪಯೋಗಿಸಿ ಕೆಲಸಮಾಡಿ ಎಂದು ಹೇಳುತ್ತಾರೆ. ಇದು ಸಮಾಜದ ವಿಡಂಬನೆಯನ್ನು ತೋರಿಸುತ್ತದೆ. ವೃತ್ತಿಯಲ್ಲಿ ನ್ಯಾಯಾಧೀಶರಾಗಿದ್ದ ಶ್ಯಾಮಭಟ್ಟರು ತಮ್ಮ ಅನುಭವದ ಮೇರೆಗೆ ಸಮಾಜದ ಸ್ಥಿತಿ ಹದಗೆಡಲು ನಾಗರಿಕ ಸಮಾಜ ರೂಪುಗೊಂಡಿಲ್ಲವೆಂದೇ ಹೇಳುತ್ತಿದ್ದರು.

ಮಹಾಬಲನು ಇಸ್ಲಾಂ ಜನರು ಮಾಡಿದ ಅನ್ಯಾಯವನ್ನು ಹೇಳುವಾಗ, ಹಿಂದೂಗಳು ಮಾಡಿದ ಅನ್ಯಾಯವನ್ನು ಎತ್ತಿ ಹೇಳುತ್ತಿದ್ದರು ಶ್ಯಾಮಭಟ್ಟರು. ಇದರ ಮುಖಾಂತರ ಹಿಂದೂ ಧರ್ಮದಲ್ಲೇ ಇರುವಂತಹ, ಒಳ ಸಂಘರ್ಷವನ್ನು ಹೇಳುತ್ತಾರೆ.

ಗಾಯಾಳುವಾಗಿ ಬಂದಂತಹ ಅನ್ವರ್‌ನಿಗೆ ಆಶ್ರಯಕೊಟ್ಟ ಉದಾರ ಮನಸ್ಸಿನವರಾಗಿ ಕಂಡು ಬರುತ್ತಾರೆ. ದೇಶದಲ್ಲಿ ಕಂಡು ಬರುತ್ತಿದ್ದ ಕೋಮುಗಲಭೆಯಿಂದಾಗಿ ಎಚ್ಚರಿಕೆಯಿಂದ ಇರಲು ತಿಳಿಸಿದ ಮಹಾಬಲನಿಗೆ "ನನ್ನ

---

**೧: ಚೂ.ಕ.ಅ.ಕ. (ಪುಟ-೩೪)**

**೨: ಚೂ.ಕ.ಅ.ಕ. (ಪುಟ-೩೮)**

**ಪ್ರಕಾರ ಈ ದೇಶ ಯಾವತ್ತೂ ಉರಿದು ಬೂದಿಯಾಗುವಂಥದಲ್ಲ. ಏನೇ ಬರಲಿ ಅದನ್ನು ಜೀರ್ಣ ಮಾಡಿಕೊಳ್ಳೋ ತಾಕತ್ತು ಈ ಹಿಂದು ಧರ್ಮಕ್ಕೆ ಇದೆ"**[೧] ಎಂದು ಧರ್ಮದ ಶ್ರೇಷ್ಠತೆಯನ್ನು ಹೇಳುತ್ತಾರೆ.

ರಾಜಕಾರಣ ಎಂಬುದು ನೇರವಾಗಿ ನಮ್ಮ ಮನೆಯೊಳಕ್ಕೆ ಪ್ರವೇಶ ಮಾಡುತ್ತಾ ಇದೆ ಎಂದು ಹೇಳಿದ ಮಹಾಬಲನಿಗೆ ಶ್ಯಾಮಭಟ್ಟರು, ಇದಕ್ಕೆ ಕಾರಣವೂ ನಾವೇ. "ಅವರವರ ಮನೆಯ ದೇವರ ಕೋಣೆಯ ಒಳಗೆ ಭದ್ರವಾಗಿ ಕೂತಿದ್ದ ಶ್ರೀರಾಮಚಂದ್ರನನ್ನೇ ಎಳೆದು ಬೀದಿಗೆ ತೆಗೊಂಡು ಬಂದವರು. ಮನೆಯಲ್ಲಿ ಇರಬೇಕಾದ್ದು ಬೀದಿಗೆ ಬಂದ ಮೇಲೆ ಬೀದಿಯಲ್ಲಿ ಇರೋದೆಲ್ಲಾ ಮನೆಯೊಳಕ್ಕೆ ಬಂದೆ ಬರುತ್ತದೆ. ಏನೂ ಮಾಡೋಹಾಗಿಲ್ಲ ಅನುಭವಿಸಬೇಕು"[೨] ಇಂದಿನ ಸಮಾಜ ಸ್ಥಿತಿ ಹಾಳಾಗಿರಲು ಕಾರಣ ನಾವೇ. ಹಿಂದೂ-ಮುಸ್ಲಿಂ ಎಂಬ ಅಂತರವೇ ಎಂದು ಹೇಳುತ್ತಾರೆ.

ಅನಂತನ ಪತ್ರವನ್ನು ನೋಡಿದಾಗ ಒಬ್ಬ ತಂದೆಯಾಗಿ ಮಗನ ಮೇಲೆ ಬಹಳ ಆಶೋತ್ತರಗಳನ್ನಿಟ್ಟುಕೊಂಡು ಅವನನ್ನು ಬೆಳೆಸುವಲ್ಲಿ ಎಲ್ಲೋ ಒಂದು ಕಡೆ ಸೋಲುತ್ತಾರೆ ಅನ್ನಿಸುತ್ತದೆ. ಮನೆಯಲ್ಲಿ ಆನಂದ ಎಂದು ಹೇಳಿಕೊಂಡು ಬಂದಿರುವವನು ಅನಂತ ಎಂದು ತಿಳಿದಾಗಲೂ ಅವನನ್ನು ಮಗ ಎಂದು ಸಂಪೂರ್ಣವಾಗಿ ನಂಬುವುದಿಲ್ಲ.

ಅನಂತ ಎಂದು ಹೇಳಿಕೊಂಡು ಬಂದವನು ಅನ್ವರ್ ಎಂದು ತಿಳಿದಾಗ **"ಈ ಹುಡುಗ ನಮ್ಮ ಮನೆಯ ಮಗ ಅಂತ ಇಲ್ಲಿಗೆ ಬಂದಿದ್ದಾನೆ. ನಾವೂ ಸತ್ಯವೋ ಸುಳ್ಳೋ ಎರಡು ದಿನ ಇವನನ್ನು ಮಗ ಅಂತಲೇ ತಿಳಿದುಕೊಂಡಿದ್ದೇವೆ. ಎರಡು ದಿನ ಹಾಗೇ ತಿಳಿದುಕೊಳ್ಳೋದು ಸಾಧ್ಯ ಇದೆ ಅಂತಾದರೆ ಇನ್ನೂ ಎರಡು ತಿಂಗಳು..... ಅಥವಾ ಎರಡು ವರ್ಷ........ ಹೀಗೆ ತಿಳಿದು ಬದುಕೋದಕ್ಕೆ ಸಾಧ್ಯ ಇಲ್ಲವೇನು?.........."**[೩] ಎಂದು ಹೇಳುತ್ತಾರೆ. ಈಡೀ ನಾಟಕದ ಆಶಯವನ್ನು ಶ್ಯಾಮಭಟ್ಟರ ಈ ನಾಲ್ಕು ಮಾತುಗಳಲ್ಲಿ ನಾಟಕಕಾರರು ಅಡಗಿಸಿಟ್ಟಿದ್ದಾರೆ. ಎಲ್ಲರೂ ನಮ್ಮವರೇ. ಹೊರಗಿನವರು ಯಾರು ಇಲ್ಲ ಎಂಬ ಹೊಸ ಸಂದೇಶವನ್ನು ಸಾರುತ್ತಾರೆ.

ಇನ್ನು ನಾಟಕದಲ್ಲಿ ಅತಿಮುಖ್ಯವಾದ ಪಾತ್ರವೆಂದರೆ ಮಹಾಬಲ. ಶ್ಯಾಮಭಟ್ಟರ ವಿರುದ್ಧವಾದಂತಹ ಪಾತ್ರ. ಇವರಿಬ್ಬರ ನಡುವೆ ತಲೆಮಾರಿನ ಅಂತರದ ಸಂಘರ್ಷ ಕಂಡು ಬರುತ್ತದೆ. ಆರ್.ಎಸ್.ಎಸ್. ಪ್ರತಿನಿಧಿಯಂತೆ ಕಂಡುಬರುವ ಮಹಾಬಲನೂ ಸಮಾಜವು ಸಮಾನತೆಯಿಂದ ಇರಲು ಹಿಂಸೆ, ರಕ್ತಪಾತ ಅನಿವಾರ್ಯ ಎಂಬ ನಿಲುವನ್ನು ಹೊಂದಿರುತ್ತಾನೆ. ಮನೆಗೆ ಬಂದಂತಹ ಅನ್ವರ್‌ನನ್ನು ಕೂಡ ಅನುಮಾನದಿಂದಲೇ ನೋಡುತ್ತಿರುತ್ತಾನೆ. ಅಲ್ಪ ಸಂಖ್ಯಾತರೆನ್ನಿಸಿ ಕೊಂಡಿರುವಂತಹ ಮುಸ್ಲಿಂರೇ ಹಿಂದೂಗಳ ಮೇಲೆ ದೌರ್ಜನ್ಯ ಮಾಡಿದ್ದರೆಂಬ ಆಕ್ರೋಶ ಉಳ್ಳವನಾಗಿರುತ್ತಾನೆ.

---

**೧: ಚೂ.ಕ.ಅ.ಕ. (ಪುಟ-೨೧)**
**೨: ಚೂ.ಕ.ಅ.ಕ. (ಪುಟ-೨೮)**
**೩: ಚೂ.ಕ.ಅ.ಕ. (ಪುಟ-೬೪)**

ಮನೆಯಲ್ಲಿ ಇದ್ದಂತಹ ವ್ಯಕ್ತಿಯೇ 'ಅನಂತ' ಎಂದು ಎಲ್ಲರಿಗೂ ತಿಳಿದಾಗಲೂ ಅದನ್ನು ವಿರೋಧಿಸಿದವನು ಮಹಾಬಲ. ಅವನ ಅನುಮಾನದಂತೆಯೇ ಮುಂದೆ ಅವನು ಅನಂತನಲ್ಲ ಎಂಬ ವಿಷಯ ತಿಳಿಯುತ್ತದೆ.

ಅನಂತ ಎಂದು ಹೇಳಿದ ಅನ್ವರ್‌ನಿಗೆ ತನ್ನ ಪೂರ್ವದ ಕಥೆಯನ್ನು ತಿಳಿಸುತ್ತಾನೆ. ತನ್ನ ಅಪ್ಪ ಹಿಂದೂ ಮತ್ತು ತಾಯಿ ಇಸ್ಲಾಂ ಧರ್ಮಿಯಳಾದ್ದರಿಂದ ಅವನು ತನ್ನ ಅಜ್ಜನ ಮನೆಗೆ ಎಂದು ಹೋಗಿರುವುದಿಲ್ಲ ಮತ್ತು ಚಿಕ್ಕವಯಸ್ಸಿನಲ್ಲಿ ಆದಂತಹ ಕಹಿಘಟನೆಯಿಂದ ಅವನು ಈ ಹಿಂಸಾತ್ಮಕ ಕೃತ್ಯದಲ್ಲಿ ಭಾಗಿಯಾಗಿದ್ದೇನೆಂದೂ.

**"ನನ್ನ ಉತ್ತರಾರ್ಧದ ಕಥೆ ರವೀಂದ್ರನಾಥ ಠಾಗೋರ್‌ರವರ 'ಗೋರಾ' ಕಾದಂಬರಿಯ ಮುಂದಿನ ಭಾಗವಾಗಿದೆ. ಕಾದಂಬರಿಯಲ್ಲಿ ಸತ್ಯವೆನೆಂದು ತಿಳಿದ ಗೋರಾ ವಿಶ್ವಮಾನವ ಆಗಿ ಬೆಳೀತಾನೆ..... ನಾನು ಹಾಗಾಗಲಿಲ್ಲ. ನನ್ನ ಪ್ರಕಾರ ಇತಿಹಾಸಕ್ಕೆ ಹೆದರಿ ಕೂರುವುದು ಮತ್ತು ಅದಕ್ಕಾಗಿ ತನ್ನತವನ್ನೇ ಕಳೆದುಕೊಳ್ಳುವುದು ಇದೆಯಲ್ಲ ಅದು ಹೇಡಿತನ. ನಿಜವಾದ ಪುರುಷತ್ವ ಇರೋವಂಥವನು ಏನು ಮಾಡುತ್ತಾನೆ ಗೊತ್ತೇನು? ಇತಿಹಾಸವನ್ನು ವರ್ತಮಾನದಿಂದ ಬದಲಾಯಿಸುತ್ತಾನೆ; ಇತಿಹಾಸಕ್ಕೆ ಪ್ರತಿಕಾರ ಮಾಡಿ ಸೇಡು ತೀರಿಸಿಕೊಳ್ಳುತ್ತಾನೆ"**[೧]. ಆದ್ದರಿಂದ ನಾನು ಹಿಂಸಾತ್ಮಕ ಕಾರ್ಯವನ್ನು ಮಾಡುತ್ತೇನೆಂದು ಹೇಳುತ್ತಾನೆ.

ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯವನ್ನು ತಡೆಗಟ್ಟಲು ಇರುವುದು ಹಿಂಸೆಯೊಂದೆ ಮಾರ್ಗವೆಂದು ತಿಳಿದುಕೊಂಡವನು ಮಹಾಬಲ, ಆದ್ದರಿಂದ ಅನ್ವರ್ ಹಿಂದೂ ಹುಡುಗಿಯನ್ನು ಪ್ರೀತಿಸಿದ ಎಂದು, ಅದರ ಶಿಕ್ಷೆಯನ್ನು ಆ ಹುಡುಗಿಗೆ ಮತ್ತು ಅನ್ವರ್ ಪರಿವಾರಕ್ಕೆ ಕೊಟ್ಟಿದ್ದನು. ಸಮಾಜದಲ್ಲಿ ಹಿಂಸೆ, ಕ್ರೌರ್ಯವನ್ನು ಮಾಡಿಯಾದರೂ ಸರಿ ಕೇಸರಿ ಬಾವುಟವನ್ನು ಹಾರಿಸಬೇಕೆಂಬ ನಿಲುವು ಅವನ ಪಾತ್ರದಲ್ಲಿ ಕಾಣುತ್ತೇವೆ.

ಇನ್ನು ನಾಟಕದಲ್ಲಿ ಬರುವಂತಹವರು ಸೀತಮ್ಮ ಮತ್ತು ಮಂದಾಕಿನಿ ಸೀತಮ್ಮ ಶ್ಯಾಮಭಟ್ಟರ ಹೆಂಡತಿ ಮತ್ತು ಮಂದಾಕಿನಿ ಶ್ಯಾಮಭಟ್ಟರ ಮಗಳು.

ಮಂದಾಕಿನಿಯು ಊರಲ್ಲಿ ನಡೆಯುತ್ತಿದ್ದಂತಹ ಗಲಭೆ, ಹಿಂಸೆ ಎಲ್ಲವನ್ನು ಖಂಡಿಸುವ ಪ್ರವೃತ್ತಿಯಾಗಿದ್ದರೆ, ಸೀತಮ್ಮ ದೂರದ ಸಂಬಂಧಿಯಾದ 'ಪ್ರೀತಿ' ಯನ್ನು ಕಳೆದು ಕೊಂಡ ದುಃಖದಲ್ಲಿರುತ್ತಾರೆ. ಅನ್ವರ್ ಮನೆಗೆ ಬಂದಾಗ ಸೀತಮ್ಮ ಮತ್ತು ಮಂದಾಕಿನಿ ಇಬ್ಬರೂ ಅವನನ್ನು ಶೂಶ್ರೂಷೆ ಮಾಡುತ್ತಾರೆ. ಮಂದಾಕಿನಿಯು ಅನ್ವರ್‌ನಲ್ಲಿ ತನ್ನ ಅಣ್ಣ ಅನಂತನನ್ನು ಕಾಣುತ್ತಾಳೆ. ಈ ವಿಷಯವನ್ನು ತನ್ನ ತಂದೆಗೆ ತಿಳಿಸಿದಾಗ ಅವರು ನಿರ್ಭಾವುಕರಾದರೆ, ಸೀತಮ್ಮ ತನ್ನ ಮಗನನ್ನು ನೆನಸಿಕೊಂಡು ಭಾವುಕಳಾಗುತ್ತಾಳೆ.

ಮನೆಯಲ್ಲಿರುವ ಅನ್ವರನೇ ಅನಂತ ಎಂದು ತಿಳಿದು ತಮ್ಮ ಚಿಕ್ಕವಯಸ್ಸಿನ ಜೊತೆಗಿದ್ದ ಕ್ಷಣಗಳನ್ನು ನೆನೆಸಿಕೊಂಡರೆ, ಸೀತಮ್ಮ ಮಗನಿಗೆ ಇಷ್ಟವಾದ ಕಾಯಿಸಾರು ಮಾಡುತ್ತಾಳೆ. ನಂತರದಲ್ಲಿ ಅವನು ತನ್ನ ಅಣ್ಣ ಅಲ್ಲ ಎಂದು ತಿಳಿದಾಗ **"ನಾನು ನಿನ್ನ ಎದುರಿಗೆ ನನ್ನ ಆಳದ ಭಾವನೆಗಳ ಬಟ್ಟೆ ಬಿಚ್ಚಿ ಬೆತ್ತಲಾದೆ ಅಂತ ಅನ್ನಿಸುತ್ತಾ**

---

೧: **ಚೂ.ಕ.ಅ.ಕ. (ಪುಟ–೫೬).**

**ಇದೆ........ ನನ್ನ ಮೇಲೆ........ ನನ್ನ ಮೇಲೆ.......... ಅತ್ಯಾಚಾರ ಆಯಿತು ಅಂತ ಅನ್ನಿಸುತ್ತಾ ಇದೆ........"** ಎಂದು ಹೇಳುತ್ತಾಳೆ. ಅಣ್ಣ ಎಂದು ನಂಬಿ ಅವನಿಂದ ಆದ ಮೋಸಕ್ಕೆ ಇಷ್ಟೆಲ್ಲಾ ಮಾತಾಡುತ್ತಾಳೆ. ನಾಟಕದಲ್ಲಿ ವಿದ್ಯಾವಂತೆ, ವಿಚಾರವಂತೆಯಾಗಿ ಕಂಡು ಬರುವ ಮಂದಾಕಿನಿ, ಹಿಂಸೆ ಮತ್ತು ಸಮಾಜದಲ್ಲಿನ ಕ್ರೌರ್ಯವನ್ನು ಖಂಡಿಸುತ್ತಾಳೆ. ಅಪ್ಪ ಅಮ್ಮನ ಪ್ರೀತಿಯ ಮಗಳಾಗಿ, ಅಣ್ಣನ ನೆಚ್ಚಿನ ತಂಗಿಯಾಗಿ ಇವಳ ಪಾತ್ರ ಚಿತ್ರಿತವಾಗಿದೆ.

ಸೀತಮ್ಮನಿಗೆ ಅವನು ತನ್ನ ಮಗ ಅನಂತನಲ್ಲ ಎಂದು ತಿಳಿದು ನಂಬವುದಕ್ಕೆ ಆಗದೇ ಮತ್ತೆ-ಮತ್ತೆ ಅವನ್ನು ನಿಜಹೇಳು ನೀನು ಅನಂತನಲ್ಲವ? ಎಂದು ಕೇಳುತ್ತಿರುತ್ತಾಳೆ. ಸೀತಮ್ಮ ಮಂದಾಕಿನಿಯರ ಪಾತ್ರ ನಾಟಕದಲ್ಲಿ ಪೋಷಕ ಪಾತ್ರದಂತೆ ಕಂಡುಬರುತ್ತದೆ.

**ನಾಟಕದಲ್ಲಿನ 'ತಂತ್ರ'ಗಳು :**

ನಾಟಕಕಾರರು ಸಮಾಜಕ್ಕೆ ಸಂದೇಶವನ್ನು ಕೊಡಲು ಅನಂತನ ಪಾತ್ರವನ್ನು ಬಳಸಿಕೊಂಡಿದ್ದಾರೆ ಎನ್ನಬಹುದು. ಅದನ್ನು ಬಿಟ್ಟರೆ ನಾಟಕದಲ್ಲಿ ಅಂತಹ ತಂತ್ರಗಳನ್ನು ಅಳವಡಿಸಿಲ್ಲ.

## 'ಜತೆಗಿರುವನು ಚಂದಿರ' – ನಾಟಕದಲ್ಲಿ ಕಂಡು ಬರುವ 'ಪಾತ್ರ ಚಿತ್ರಣ' ಮತ್ತು 'ತಂತ್ರ'ಗಳು

ಈ ನಾಟಕದಲ್ಲಿ ಬಹುಮುಖ್ಯಪಾತ್ರಗಳೆಂದರೆ, ಬಡೇಮಿಯಾ, ಶಕೂರ್ ಮಾಸ್ತರ್, ಶಬ್ನಂ ಮತ್ತು ಸೈರಾ. ಉಳಿದಂತೆ ಮನೀರ್‌ಜಾನ್, ಆರ್ಷಿಯಾ, ಶಫೀ, ಚಾಂದ್ ಬೇಜಿ, ಕಲಾಯಿಭಾಯಿ ಇವರೆಲ್ಲ ಪೂರಕ ಪಾತ್ರವಾಗಿ ಕಂಡುಬರುತ್ತಾರೆ.

ಅನುವಾದ ನಾಟಕ ಇದಾದರೂ ಭಾರತೀಯ ಸಂದರ್ಭಕ್ಕೆ ಹೊಂದಿಕೊಳ್ಳುವಂತೆ ಸ್ವತಂತ್ರತೆಯನ್ನು ಇಲ್ಲಿನ ಪಾತ್ರಗಳು ಪಡೆದುಕೊಂಡಿದೆ.

'ಬಡೇಮಿಯಾ' ಮನೆಯ ಒಡೆಯ, ಮೂರು ಹೆಣ್ಣು ಮಕ್ಕಳು, ಹೆಂಡತಿಯೊಂದಿಗೆ ಸಂಸಾರ ಸಾಗಿಸುವಂತಹ ಸಾಮಾನ್ಯ ಮನುಷ್ಯನಂತೆ ಕಂಡುಬರುತ್ತಾನೆ. ಇಸ್ಲಾಂ ಧರ್ಮದ ಕಟ್ಟಾ ಅನುಯಾಯಿ ಮತ್ತು ತುಂಬಾ ಹಾಸ್ಯ ಮಾಡುವಂತಹ ಪ್ರವೃತ್ತಿ ಉಳ್ಳುವನು ತನಗೆ ಕಷ್ಟ ಬಂದಾಗ ದೇವರೊಂದಿಗೆ ಸಂಭಾಷಣೆ ಮಾಡುತ್ತಾನೆ, ಇದಕ್ಕೆಲ್ಲ ಕಾರಣ ನೀನೇ ಎಂದು ಹೇಳುತ್ತಿರುತ್ತಾನೆ. 'ಶಕೂರ್ ಮಾಸ್ತರ್' ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯವನ್ನೆಲ್ಲಾ ಹೇಳಿ ಎಲ್ಲರಿಗೂ ಕಣ್ಣುತೆರೆಸುತ್ತಾನೆ. ಮುಸ್ಲಿಂ ಹೆಣುಮಕ್ಕಳು ವಿದ್ಯೆಕಲಿಯುವುದು ಅಪರಾಧವಾಗಿದ್ದ ಕಾಲದಲ್ಲಿ

ಬಡೇಮಿಯಾ ತನ್ನ ಹೆಣ್ಣುಮಕ್ಕಳಿಗೆ ಪಾಠ ಹೇಳಿಕೊಡು ಎಂದು 'ಶಕೂರ್ ಮಾಸ್ತರ್'ನ್ನು ಮನೆಗೆ ಕರೆತರುತ್ತಾನೆ. ನಂತರದಲ್ಲಿ ಮನೆಯವರೆಲ್ಲರು ಚಂದ್ರನ ದರ್ಶನ ಮಾಡಿ ರಂಜಾನ್ ಹಬ್ಬವನ್ನು ಸಂಭ್ರದಿಂದ ಆಚರಿಸುತ್ತಾರೆ.

ತನ್ನ ಮೊದಲ ಮಗಳು ಅಷಿಯಾಗೆ ಕಲ್ಯಾಭ್ಯಾನಿಗೆ ಕೊಟ್ಟು ಮದುವೆ ಮಾಡಬಹುದೆಂದು ಮುನೀರ್ ಜಾನ್ ಹೇಳಿದಾಗ ತನಗಿಂತ ಹೆಚ್ಚಿನ ವಯಸ್ಸಾದ ಅವನಿಗೆ ಮಗಳನ್ನು ಕೊಡಲು ನಿರಾಕರಿಸುತ್ತಾನೆ. ನಂತರದಲ್ಲಿ ತನ್ನ ಮಗಳು ಅವನ ಮನೆಯಲ್ಲಿ ಸುಖವಾಗಿರಬಲ್ಲಳು ಎಂದು ಯೋಚಿಸಿ ಒಪ್ಪಿಗೆ ಕೊಡುತ್ತಾನೆ. ಬಡ ತಂದೆ ತನ್ನ ಮಗಳಾದರೂ ಶ್ರೀಮಂತಿಕೆಯಿಂದ ಸುಖವಾಗಿರಲೆಂದು ಆಶಿಸುತ್ತಾನೆ. ತನ್ನ ಮಗಳ ಮದುವೆ ನಿಶ್ಚಯವಾಯಿತೆಂದು ಸಂತೋಷದಲ್ಲಿ ಇರುವಾಗ ಅರ್ಷಿಯಾಗೆ ಈ ಮದುವೆ ಇಷ್ಟವಿಲ್ಲದಿರುವುದು ತಿಳಿದು ನಿನಗೆ ಬಲವಂತ ಮಾಡೋದಿಲ್ಲ ಎಂದು ಹೇಳುತ್ತಿರುವಾಗಲೇ 'ಶಫಿ' (ದರ್ಜಿ) ಬಂದು ತಾನು ಆರ್ಷಿಳಾಳನ್ನು ಪ್ರೀತಿಸುತ್ತಿದ್ದೀನಿ ಅವಳನ್ನು ವಿವಾಹವಾಗುತ್ತೇನೆಂದಾಗ, ಬಡ ದರ್ಜಿಗೆ ತನ್ನ ಮಗಳನ್ನು ಕೊಡಲು ಒಪ್ಪದೆ ನಿರಾಕರಿಸುತ್ತಾನೆ. ಪರಂಪರೆಯ ಚೌಕಟ್ಟಿನಲ್ಲೇ ಇದ್ದಂತಹ ಬಡೇಮಿಯಾಗೆ ಇದು ಪರಂಪರೆಯನ್ನು ಮೀರಿದ ಕೆಲಸವಾಗಿ ಕಂಡುಬರುತ್ತದೆ. ಇಲ್ಲಿ ಸಮಾಜಕ್ಕೆ ಹೆದರಿದ ವ್ಯಕ್ತಿಯಾಗಿ ಕಂಡು ಬರುತ್ತನಾದರೂ. ಅನಂತರವೇ ಮಗಳ ಸಂತೋಷಕ್ಕಾಗಿ ಹಳೆಯ ಪರಂಪರೆಯನ್ನು ಮೀರಿ ಮಗಳಿಗೆ ಶಫಿಯೊಡನೆ ವಿವಾಹ ಮಾಡಲು ಒಪ್ಪುತ್ತಾನೆ. ಮಗಳ ಮದುವೆ ಶ್ರೀಮಂತನೊಂದಿಗೆ ಆಗುತ್ತದೆಂಬ ಕನಸ್ಸನ್ನು ಕಟ್ಟುಕೊಂಡಂತಹ ಹೆಂಡತಿ ಮುನೀರ್‌ಜಾನ್‌ನ್ನು ಈ ಮದುವೆಗೆ ಒಪ್ಪಿಸಲು ಒಂದು ನಾಟಕವನ್ನೇ ಮಾಡುತ್ತಾನೆ. ಮಗಳ ಸಂತೋಷಕ್ಕಾಗಿ ಕೊಟ್ಟ ಮಾತು, ಇಟ್ಟುಕೊಂಡಿದ್ದ ಆಸೆ ಎಲ್ಲವನ್ನು ಕೈಬಿಡುತ್ತಾನೆ. ಪ್ರೀತಿಯ ಮಗಳ ಮದುವೆಯ ತಯಾರಿಯ ಸಂದರ್ಭದಲ್ಲಿ.

**"ಜೋಡಿ ಹಕ್ಕಿ ಪ್ರೇಮದಿಂದ ಕಟ್ಟುತ್ತಿರುವ ಗೂಡು**

**ಮಳೆಗಾಳಿಗೆ ದೇವರೇ ಬೀಳದಂತೆ ನೋಡು"**[1] ಎಂದು ದೇವರಲ್ಲಿ ಪ್ರಾರ್ಥಿಸುತ್ತಾನೆ. ಆರ್ಷಿಯಾ ಮದುವೆಯ ಸಂದರ್ಭದಲ್ಲಿ ಕಲ್ಯಾಭ್ಯಾ ಬಡೇಮಿಯಾನೊಂದಿಗೆವಾದಕ್ಕೆ ಇಳಿದಾಗಲೂ ಅವನನ್ನು ಸಂತೈಸುತ್ತಾನೆ. ಇದೇ ಸಂದರ್ಭದಲ್ಲಿ ಪೊಲೀಸರು ಬಂದು ಮಾಡಿದ ಗಲಾಟೆಯು ಬಡೇಮಿಯಾ ಪರಿವಾರದ ದಿಕ್ಕನ್ನೇ ಬದಲಾಯಿಸಲು ನಾಂದಿಯಾಯಿತು, ಮಗಳ ಸಂತೋಷವನ್ನು ಬಯಸುವ ಬಡೇಮಿಯಾ ದೇವರಲ್ಲಿ ಶಫಿಗೊಂದು 'ಹೊಲಿಗೆ ಯಂತ್ರ' ಸಿಗುವಂತೆ ಮಾಡು ಎಂದು ಕೇಳಿಕೊಳ್ಳುತ್ತಾನೆ.

ಕ್ರಾಂತಿಕಾರಕ ಮನೋಭಾವನೆವುಳ್ಳ ಶಕೂರ್ ಮಾಸ್ತರನ್ನು ಮಗಳು ಶಬ್ನಂ ಪ್ರೀತಿಸುತ್ತಿದ್ದಾಳೆಂದು ತಿಳಿದು ಗಾಬರಿಗೊಳ್ಳುತ್ತಾನೆ. ದೇಶದ ಸೇವೆಮಾಡಲು ಹೊರಡು ಆದರೆ ಮಗಳನ್ನು ಕೊಡುವುದಿಲ್ಲ ಎನ್ನುತ್ತಾನೆ. ಅವರಿಬ್ಬರ ದೃಢನಿಶ್ಚಯವನ್ನು ತಿಳಿದು ತಲ್ಲಣಗೊಳ್ಳುತ್ತಾನೆ. ಮತ್ತೆ ಹೆಂಡತಿಯನ್ನು ಒಪ್ಪಿಸಲು ಮತ್ತೊಂದು ನಾಟಕ ರಚಿಸುತ್ತಾನೆ. ನಾಟಕದಲೊಂದು ನಾಟಕ ನಡೆಸುತ್ತಾನೆ ಬಡೇಮಿಯಾ. ತನ್ನ ಮುಗ್ಧ ಹೆಂಡತಿಯ ಮನಸ್ಸನ್ನು ಬದಲಾಯಿಸಲು ಅಷ್ಟೊಂದು ಕಷ್ಟವೂ ಆಗಲಿಲ್ಲ. ಅಷ್ಟರಲ್ಲಿ ಶಕೂರ್ ಮಾಸ್ತರನ ಬಂಧನದ ವಿಷಯ ತಿಳಿದ ಶಬ್ನಂ ಅವನಲ್ಲಿಗೆ ಹೋಗಲು ತೀರ್ಮಾನಿಸಿದಾಗ ಮಗಳ ತೀರ್ಮಾನಕ್ಕೆ ಒಪ್ಪಿದ ಬಡೇಮಿಯಾ.

---

೧: ಜ.ಚ. (ಪುಟ-೫೦)

**"ಅವಳು ಕುಡಿಯೋ ನೀರು ಕಡಿಮೆ ಮಾಡಬೇಡ.**

**ಅವಳಿಗೊಂದು ನೆಲೆಕೊಡು**

**ಅವಳನ್ನು ಬೆಚ್ಚಗಿಡು"**[೧]

ಎಂದು ದೇವರಲ್ಲಿ ಪ್ರಾರ್ಥಿಸಿದ. ತನ್ನ ಮಕ್ಕಳ ಸಂತೋಷವೇ ತನ್ನ ಸಂತೋಷವೆಂದು ಇದ್ದ ಬಡೇಮಿಯಾ ಪಾತ್ರ ಚಿತ್ರಣ ಸೈರಾ ಹಿಂದೂ ಹುಡುಗನೊಬ್ಬನು ಮದುವೆ ಆದಾಗ ಬದಲಾಗುತ್ತದೆ.

**"ಸತ್ತೋದ್ಲು ಅವಳು**

**ನಮ್ಮ ಪಾಲಿಗೆ ಸತ್ತೋದ್ಲು"**[೨] ಎನ್ನುತ್ತಾನೆ.

ಆರ್ಷಿಯಾ, ಶಬ್ನಂ, ಇಬ್ಬರೂ ಪ್ರೀತಿಸಿದ ಹುಡುಗರನ್ನು ಮದುವೆ ಮಾಡಿಕೊಳ್ಳಲು ಒಪ್ಪಿದ ಬಡೇಮಿಯಾ 'ಸೈರಾ'ನ ವಿಷಯದಲ್ಲಿ ವಿರುದ್ಧವಾಗುತ್ತಾನೆ. ಕಾರಣ ಅವನು ಹಿಂದೂ ಹುಡಗನೆಂದು ಇರಬಹುದು, ಇಲ್ಲವೆ ಇದರಿಂದ ಹಿಂದೂ-ಮುಸ್ಲಿಂ ನಡುವೆ ಕೋಮುಗಲಭೆ ಏರ್ಪಡುತ್ತದೆ ಎಂದೂ ಇರಬಹುದು. ಒಟ್ಟಿನಲ್ಲಿ ಬಡೇಮಿಯಾರ ಇನ್ನೊಂದು ರೀತಿಯ ಪಾತ್ರ ಚಿತ್ರಣವನ್ನು 'ಸೈರಾ' ವಿಷಯದಲ್ಲಿ ನೋಡಬಹುದು. 'ಸೈರಾ'ಳ ವಿಷಯದಿಂದಲೇ ಊರಿನಲ್ಲಿ ಕೋಮು ಗಲಭೆ ಹೆಚ್ಚಾಗಿ ಊರು ಬಿಡುವ ಸ್ಥಿತಿ ಬಂದಾಗಲೂ ಎದುರಿಗೆ ಬಂದಂತಹ 'ಸೈರಾ'ಳನ್ನು ಮಾತೂ ಆಡಿಸದೆ ಹೊರಡುತ್ತಾನೆ. ಕೊನೆಯಲ್ಲಿ ತನ್ನಷ್ಟಕ್ಕೆ ತಾನೇ **"ದೇವರು ಒಳ್ಳೆದು ಮಾಡಲಿ"** ಎಂದು ಹೇಳುತ್ತಾನೆ. ಮಕ್ಕಳು ಏನೇ ತಪ್ಪು ಮಾಡಿದರೂ ಅವರನ್ನು ಕ್ಷಮಿಸಿ ಹರಸುವ ಗುಣವು ತಂದೆಯಾದ ಬಡೇಮಿಯಾನ ಪಾತ್ರದಲ್ಲಿದೆ.

ನಾಟಕದಲ್ಲಿ ಮತ್ತೊಂದು ಮುಖ್ಯಪಾತ್ರವೆಂದರೆ ಶಕೂರ್ ಮಾಸ್ತರ್. ಅಜ್ಞಾನದ ಕತ್ತಲೆಯಲ್ಲಿ ಕೂತಿದ್ದ ಜನರಿಗೆ ಜ್ಞಾನದ ಬೆಳಕನ್ನು ಚೆಲ್ಲುವ ಶಕೂರ್ ಮಾಸ್ತರ್‌ನು ಬರುತ್ತಾನೆ. ಇವನ ಅಭಿಮಾನಿ ಶಬ್ನಂ. ಇವನ ಆದರ್ಶಕ್ಕೆ ಮಾರು ಹೋಗಿ ಅವನನ್ನೇ ಹಿಂಬಾಲಿಸುವ ಧೈರ್ಯವಂತೆಯಾಗಿ ಕಾಣುತ್ತಾಳೆ. ನಾಟಕದುದ್ದಕ್ಕೂ ಜೊತೆ-ಜೊತೆಯಲ್ಲಿಯೇ ಸಾಗುವಂತಹ ಪಾತ್ರಗಳಿವು.

ಬಡೇಮಿಯಾ ಹಳ್ಳಿಗೆ ಬಂದಂತಹ ಶಕೂರ್ ಮಾತಿಗೆ ಬಡೇಮಿಯಾ ಮರುಳಾಗುತ್ತಾನೆ. ಶಕೂರ್‌ನ ಈ ಮಾತು ಅಂದಿನ ಸಮಾಜಕ್ಕೆ ಕ್ರಾಂತಿಯನ್ನು ಎಬ್ಬಿಸುವಂತಹ ವಿಷಯಗಳಾಗಿದ್ದವು.

**"ಹೆಣ್ಣು ಮಕ್ಕಳಾದರೆ ಏನಾಯ್ತು. ನಾಳೆ ಮತ್ತೆ ಮಕ್ಕಳನ್ನು ಹೆತ್ತು ಬೆಳೆಸುವವರು ಅವರೇ ಅವರಿಗೆ ಮುಖ್ಯವಾಗಿ ಶಿಕ್ಷಣ ಬೇಕು. ಪ್ರತೀ ಮನೆಯನ್ನು ರೂಪಿಸುವವರು ಅವರೇ".**[೩]

---

೧: ಜ.ಚ. (ಪುಟ-೭೧)

೨: ಜ.ಚ. (ಪುಟ-೭೪)

೩: ಜ.ಚ. (ಪುಟ-೨೩)

ಈ ಹೊಸವಿಚಾರವನ್ನು ತನ್ನ ಹೆಣ್ಣುಮಕ್ಕಳಿಗೂ ಹೇಳಿಕೊಡುವಂತೆ ಬಡೇಮಿಯಾ ಕೇಳಿದಾಗ ಅವರ ಮನೆಗೆ ಶಕೂರ್ ಮಾಸ್ತರಾಗಿ ಹೋಗುತ್ತಾನೆ. ಅವರೊಡನೆ ರಂಜ಼ಾನ್ ಹಬ್ಬವನ್ನು ಆಚರಿಸುತ್ತಾನೆ. ಶಬ್ನಂ, ಮಾಸ್ತರ್‌ನ ಪಕ್ಕ ಶಿಷ್ಯೆಯಾಗುತ್ತಾಳೆ. ಶಿಲಾಯುಗದಿಂದ ಹಿಡಿದು ಇಂದಿನ ಆಧುನಿಕ ಯುಗದವರೆಗೆ ನಡೆದ ಮಾನವನ ಸ್ಥಿತ್ಯಂತರಗಳನ್ನು ಹೇಳುತ್ತಾನೆ. ಮಾಸ್ತರ ಪಾಠವನ್ನು ಕೇಳುತ್ತಾ-ಕೇಳುತ್ತಾ ಶಬ್ನಂ ಅವನೊಂದಿಗೆ ಆಕರ್ಷಿತಳಾಗುತ್ತಾಳೆ. ಹೆಣ್ಣು-ಗಂಡಿನ ನಡುವಿನ ಅಂತರವನ್ನು ಹೇಳುತ್ತಾನೆ, ಗಂಡಿಗಿಂತ ಹೆಣ್ಣು ಕಷ್ಟಜೀವಿ ಎಂದು ತಿಳಿಸುತ್ತಾನೆ. ಆರ್ಷಿಯಾಳ ಮದುವೆ ಶ್ರೀಮಂತನೊಂದಿಗೆ ನಿಶ್ಚಯವಾದಾಗ-ಮದುವೆಗೆ ಹಣವೊಂದೇ ಮಾನದಂಡವಾಗಬಾರದು ಎಂದು ಹೇಳುತ್ತಾನೆ. ಪೇಟೆಯಲ್ಲಿ ಓದಿದರಿಂದ ಶಕೂರ್ ಮುಕ್ತ ಮನಸ್ಥಿತಿಯವನಾಗಿರುತ್ತಾನೆ. ಇಲ್ಲಿನ ಕಟ್ಟುಪಾಡುಗಳನ್ನು ಹೋಗಲಾಡಿಸಿ ಅವರಲ್ಲಿ ಮುಕ್ತತೆಯನ್ನು ತರುವ ಯತ್ನದಲ್ಲಿದ್ದಾನೆ. ಹಾಗಾಗಿ ಆರ್ಷಿಯಾಳ ಮದುವೆಯ ಸಂದರ್ಭದಲ್ಲಿ ಕಲ್ಯಾಭ್ಯಾ ಮಾಡಿದ ಗಲಾಟೆಗೆ ಉತ್ತರವೆಂಬಂತೆ 'ಆರ್ಷಿಯಾ ಪ್ರೀತಿಸಿದ ಶಫಿಯನ್ನು ಹೊರತು ಕಲ್ಯಾಭ್ಯಾನಲ್ಲ' ಎಂದಾಗ ಎಲ್ಲರಿಗೂ ಇದು ಹೊಸದೊಂದು ವಿಚಾರವಾಗಿತ್ತು. ಮತ್ತೂ ಮುಂದುವರೆದು ಶಕೂರ್ ಈ ಸಂತೋಷ ಸಂದರ್ಭದಲ್ಲಿ ಎಲ್ಲರು ನರ್ತಿಸಿ ಎಂದಾಗ, ಎಲ್ಲರ ಮನಸ್ಸಿಗೆ ಅಘಾತವಾದಂತೆ ನಿಲ್ಲುತ್ತಾರೆ. ಶಬ್ನಂ ಮಾತ್ರ ಅವನ ಜೊತೆ ಕುಣಿಯುತ್ತಾಳೆ. ಇವರ ಜೊತೆ ಬಡೇಮಿಯಾನು ಸೇರಿಕೊಳ್ಳುತ್ತಾನೆ ಮತ್ತು ಕೊನೆಯಲ್ಲಿ ಉಳಿದವರೆಲ್ಲರೂ ಸೇರುತ್ತಾರೆ. ಶಕೂರ್ ಹೇಳಿಕೊಟ್ಟ ಪಾಠದಂತೆ ಎಲ್ಲರೂ ಕುಣಿಯುತ್ತಾರೆ.

ನಂತರದಲ್ಲಿ ಶಕೂರ್ ದೇಶದಲ್ಲಿ ಆಗುತ್ತಿರುವ ದಂಗೆಯ ಬಗ್ಗೆ ಶಬ್ನಂಗೆ ಹೇಳುತ್ತಾನೆ. **"ಸಾಮಾನ್ಯ ಜನತೆಯ ಹಾದಿ ತಪ್ಪಿಸೋ ಕಿಡಿಗೇಡಿಗಳು ಇದ್ದಾರೆ. ಅವರ ಕೈ ಮೇಲಾಗದಂತೆ ನೋಡೋದೇ ನಮ್ಮಗುರಿ ವಿಭಜನೆ ಆಗೋದೇ ಹೌದು ಅಂತಾದರೆ ಅದು ಸಮರ್ಪಕವಾಗಿ ಆಗಬೇಕು. ನೋವಿಲ್ಲದೆ ಆಗಬೇಕು"**[೧] ಎನ್ನುತ್ತಾನೆ. ದೇಶದಲ್ಲಿ ಆಗುತ್ತಿರುವ ಕೋಮುಗಲಭೆ, ಮತ್ತು ಅದನ್ನೆ ತಮ್ಮ ಸ್ವಾರ್ಥಕ್ಕೆ ಬಳಸಿಕೊಳ್ಳುವಂತಹ ಜನರ ಬಗ್ಗೆ ಹೇಳುತ್ತಾನೆ. ಮತ್ತು ದೇಶಕ್ಕೆ ನನ್ನ ಅಗತ್ಯವಿದೆ ಎಂದು ದೇಶಕ್ಕಾಗಿ ದುಡಿಯುವ ಪ್ರಾಮಾಣಿಕ ಸಿಪಾಯಿಂತೆ ಕಾಣುತ್ತಾನೆ. ಇದಕ್ಕೆಲ್ಲಾ ಬೆನ್ನೆಲುಬಾಗಿ ಶಬ್ನಂ ನಿಲ್ಲುತ್ತಾಳೆ. **"ದೇಶ ಕಾಪಾಡು, ನಿನಗೆ ಯಶಸಿಗಲಿ"** ಎಂದು ಹೇಳುತ್ತಾಳೆ.

ಬಡೇಮಿಯಾನ ಬಳಿ ತಾವು ಮದುವೆ ನಿಶ್ಚಯಿಸಿ ಕೊಂಡಿದ್ದೀವಿ ನಮಗೆ ಆಶೀರ್ವಾದ ಬೇಕೇ ಹೊರತು ನಿಮ್ಮ ಒಪ್ಪಿಗೆಯಲ್ಲ ಎಂಬ ದಿಟ್ಟ ಮಾತುಗಳನ್ನು ಆಡುತ್ತಾರೆ. ಇದು ಅವರ ವಿಚಾರವಂತಿಕೆ ಮತ್ತು ವಿಶ್ವಾಸಗಳಿಂದ ಕೂಡಿದಮಾತಾಗಿರುತ್ತದೆ. ಬಡೇಮಿಯಾ ಒಪ್ಪಿದ ಮೇಲೆ ಹೊರಟ ಶಕೂರ್‌ನಿಂದ ಸ್ವಲ್ಪ ದಿನದಲ್ಲೇ ಪತ್ರ ಬರುತ್ತದೆ. ಅವನನ್ನು ರಾಜಧಾನಿಯಲ್ಲಿ ಸೆರೆ ಹಿಡದರು ಎಂದು. ಇದನ್ನು ತಿಳಿದ ಶಬ್ನಂ.

---

೧: ಜ.ಚ. (ಪುಟ-೫೮)

"ಅವನೇನೂ ಅಪರಾಧ ಮಾಡ್ತಾ ಇಲ್ಲ ಅಪ್ಪಾ, ತನಗಾಗಿ ಎಂದೂ ಯೋಚಿಸಿದವನೇ ಅಲ್ಲ. ಅವನ ಹೋರಾಟ ಜನತೆಗಾಗಿ"[೧] ಎಂದು ಅವನಿಗೆ ನೆರವಾಗಲು ರಾಜಧಾನಿಗೆ ಹೊರಡುತ್ತಾಳೆ.

ಹಳ್ಳಿಯ ಜನರಲ್ಲಿ ಕವಿದ ಕತ್ತಲೆಯನ್ನು ಹೋಗಲಾಡಿಸಿ ಬೆಳಕನ್ನು ಚಲ್ಲಬೇಕು ಎಂದು ಬಂದಂತಹ ಮಾಸ್ತರ್‌ನಿಗೆ ಅನುಗುಣವಾದ ಶಿಷ್ಯೆಯಾಗಿ ಶಬ್ನಂ ರೂಪುಗೊಳ್ಳುತ್ತಾಳೆ.

'ಸೈರಾ' ನಾಟಕದ ಮಹತ್ವದ ಮತ್ತೊಂದು ಪಾತ್ರ, ಬಡೇಮಿಯಾನ ಮೂರನೇ ಮಗಳು ಇವಳಿಂದಲೇ ನಾಟಕದ ಆಯಾಮ ಬದಲಾಗುತ್ತದೆ. ಬಹಳ ವಿಶಿಷ್ಟ ಪಾತ್ರ ಸೈರಾಳದ್ದು. ನಾಟಕದಲ್ಲಿ ಹೆಚ್ಚು ಕಾಣಿಸಿಕೊಳ್ಳದ ಪಾತ್ರವಾದರೂ ನಾಟಕದ ಮಹತ್ವದ ವಿಷಯ ತಿಳಿಸಲು ಈ ಪಾತ್ರವನ್ನು ನಾಟಕಕಾರರು ಬಳಸಿಕೊಂಡಿದ್ದಾರೆ. ಇವಳಿಗೆ ಓದಲು ಪುಸ್ತಕ ಕೊಡುತ್ತಿದ್ದವನು ಪಂಡಿತರ ಮಗ ಎಂದು ಒಂದು ಭಾರಿ 'ಶಫಿ' ಹೇಳುತ್ತಾನೆ. ಆಗಷ್ಟೇ ಅವಳು ಪಂಡಿತರ ಮಗನನ್ನು ಪ್ರೀತಿಸುತ್ತಿರಬಹುದೆಂದು ತಿಳಿಯುತ್ತದೆ. ಕೊನೆಗೆ ಅವನೊಡನೆ ಓಡಿ ಹೋಗಿ ಮದುವೆಯಾಗಿರುತ್ತಾಳೆ. ಇದರಿಂದ ಬಡೇಮಿಯಾ 'ಸೈರಾ' ನಮ್ಮ ಪಾಲಿಗೆ ಸತ್ತು ಹೋದಳು ಎಂದು ಕೊಳ್ಳುತ್ತಾನೆ. ಇವಳ ಈ ಕಾರ್ಯದಿಂದಲೇ ಊರಿನಲ್ಲಿ ಧಂಗೆಯು ಹೆಚ್ಚಾಗಿ ಎಲ್ಲರನ್ನು ಊರು ಬಿಟ್ಟು ಓಡಿಸುವ ಸಂದರ್ಭ ಬರುತ್ತದೆ. ಇದಕ್ಕೆ ಬಡೇಮಿಯಾ ಪರಿವಾರ ಹೊರತಾಗಿರಲಿಲ್ಲ. ಆ ಸಂದರ್ಭದಲ್ಲಿ ಬಂದಂತಹ 'ಸೈರಾ'ಳ ಕುತ್ತಿಗೆಯಲ್ಲಿ **'ಮಂಗಳಸೂತ್ರ'** ಕಾಣುವುದು ಬಹಳ ವಿಶೇಷವಾಗಿದೆ. ಹಿಂದೂ ಹುಡುಗನ್ನು ಮದುವೆಯಾದ 'ಸೈರಾ' ಹಿಂದೂ ಧರ್ಮಿಯ ಗೃಹಿಣಿಯಂತೆ ಕಾಣುತ್ತಾಳೆ. ಸಮಾಜದಲ್ಲಿ ಕೋಮುಗಲಭೆ ಇರುವುದನ್ನು ಹೇಳುವುದು ವಾಸ್ತವದ ಸಂಗತಿಯಾದರೆ, ಸೈರಾಳ ಮುಖಾಂತರ ಸಮಾಜ ಬದಲಾವಣೆಯಾಗಬೇಕೆಂಬ ಆದರ್ಶವನ್ನು ಹೇಳಲಾಗಿದೆ.

'ಶಫಿ ಮತ್ತು ಆರ್ಷೀಯಾ' ನಾಟಕದಲ್ಲಿ ಕಂಡುಬರುವ ಪೂರಕ ಪಾತ್ರಗಳು. ಆರ್ಷಿಯಾಳ ಮದುವೆ ಮಾಡಿಸಲು ಚಾಂದ್ ಬೇಬಿ, ಶ್ರೀಮಂತ ವಿಧುರನಾದ ಕಲ್ಯಾಭ್ಯಾನನ್ನು ಗೊತ್ತುಮಾಡುತ್ತಾಳೆ. ಈ ಪಾತ್ರಗಳೆಲ್ಲವೂ ಒಂದಕ್ಕೊಂದು ಸಂಬಂಧ್ರ ಹೊಂದಿರುವಂತಹದ್ದಾಗಿದೆ.

ಚಾಂದ್ ಬೇಬಿ ತೋರಿಸಿದ ಕಲ್ಯಾಭ್ಯಾನನ್ನು ನಿರಾಕರಿಸಿ ಶಫಿಯನ್ನು ಮದುವೆಯಾಗಲು ಮುಂದಾಗುತ್ತಾಳೆ ಆರ್ಷಿಯಾ. ಇದಕ್ಕಾಗಿ ಬಡೇಮಿಯಾಳನ್ನು ಒಪ್ಪಿಸುವಲ್ಲಿ ಶಫಿ ಮತ್ತು ಆರ್ಷಿಯಾ ಯಶಸ್ವಿಯಾಗುತ್ತಾರೆ. ಪರಂಪರೆಯಿಂದ ಬಿಡಿಸಿಕೊಂಡು ಬಂದಂತಹ ಸ್ವತಂತ್ರ ಪಾತ್ರಗಳಿವು. ಚಾಂದ್‌ಬೇಬಿಯು ಮದುವೆ ಗೊತ್ತು ಮಾಡುವ ಮಧ್ಯವರ್ತಿ ಇವಳ ಪಾತ್ರದಿಂದ ಅಂದಿನ ಸಮಾಜಿಕ ಸ್ಥಿತಿಯನ್ನು ತಿಳಿಯಬಹುದಾಗಿದೆ.

ಮುನೀರ್‌ಜಾನ್, ಬಡೆಮಿಯಾನ ಪತ್ನಿ. ಆದರ್ಶ ಪತ್ನಿಯಂತೆ ಮುನೀರ್‌ಜಾನ್ ಇರುತ್ತಾರೆ. ತನ್ನ ಹೆಣ್ಣುಮಕ್ಕಳಿಗೆ ಮದುವೆ ಮಾಡುವ ಕನಸನ್ನು ಕಾಣುವ ಪಾತ್ರವದು. ಆರ್ಷಿಯಾಳ ಮದುವೆ ಕಲ್ಯಾಭ್ಯಾ ರೊಡನೆ ನಿಶ್ಚಿಯವಾದಾಗ ಸಂತೋಷಪಟ್ಟಾಕೆ ಅವಳು. ಮತ್ತೆ ಬಡೇಮಿಯಾ ಮಾಡಿದಂತಹ ನಾಟಕವನ್ನು

೧: ಜ.ಚ. (ಪುಟ-೭೦)

ನಂಬಿ ಶಫಿಯೊಡನೆ ಮದುವೆ ಮಾಡಿಕೊಡುವ ಮುಗ್ಧೆ. ಮತ್ತೆ ಶಬ್ನಂ ಮತ್ತು ಶಕೂರ್‌ನ ವಿಷಯದಲ್ಲೂ ಬಡೇಮಿಯಾನ ಮಾತನ್ನು ನಂಬಿಕೊಂಡರೆ, ಬಡೇಮಿಯಾ ನನ್ನನ್ನು ಪ್ರೇಮಿಸುತ್ತೀಯಾ ಎಂದಾಗ ನಾಚಿ ಪ್ರೇಮಿಸ್ತೀನಿ ಎಂದು ಹೇಳುತ್ತಾಳೆ. **'ಸೈರಾ'** ಮನೆ ಬಿಟ್ಟು ಹೋದಾಗಲೂ ಅವಳ ಬಗ್ಗೆ ಅನುಕಂಪವನ್ನು ಹೊಂದಿದ ಮಹಾತಾಯಿ ಮುನೀರ್ ಜಾನ್. ಊರು ಬಿಡುವ ಸಂದರ್ಭದಲ್ಲಿ **"ನನ್ನ ಮನೇಲಿ ಕಸಾ ಬಿಟ್ಟು ಹೋಗೋದಿಲ್ಲ ನಾನು. ಮುಂದಾಗಿ ನೀವು ಹೋಗಿ ಈಗ ಬರ್ತೀನಿ"**[೧] ಎಂದು ಮನೆ ಕಸ ಗುಡಿಸುತ್ತಾ ನಿಲ್ಲುತ್ತಾಳೆ.

**ನಾಟಕದಲ್ಲಿ ಅಳವಡಿಸಿದ 'ತಂತ್ರಗಳು'**– ನಾಟಕ ಪ್ರಾರಂಭವಾಗುವುದೇ ಹಾಡಿನಮುಖಾಂತರ ಗಂಭೀರವಾದ ವಸ್ತುವನ್ನು ಹೇಳಲು ಹೊರಟಿರುವುದುರಿಂದ ಇದಕ್ಕೆ ಮುನ್ನ ವೀಕ್ಷಕರ ಮನಸ್ಸನ್ನು ಸಮಸ್ಥಿತಿಯಲ್ಲಿ ಇಡಲು ಈ ಪ್ರಯತ್ನವಾಗಿದೆ.

**"ಪರಂಪರೇ ಪರಂಪರೇ**

**ಪರಂಪರಂ ಪರಂಪರೇ**

**ಹೇಗೆ ಉಣ್ಣೋದು... ಹೇಗೆ ಮಲಗೋದು.... ಹೇಗೆ ಕನಸು ಕಾಣೋದು**

**ಎಲ್ಲದಕ್ಕೂ ಪರಂಪರೆ.**

**ಉಡುಗೆ ತೊಡುಗೆ ನಡಿಗೆ ಎಲ್ಲದಕ್ಕೂ ಪರಂಪರೆ"**[೨]

ಹೀಗೆ ಸಮಾಜವು ಹೇಗೆ ಪರಂಪರೆಯ ಜೊತೆಗೆ ಬಿದ್ದಿರುವುದನ್ನು ತೋರುತ್ತದೆ. ಮತ್ತು ಇಡೀ ನಾಟಕದಲ್ಲಿ ಯಾವ-ಯಾವ ಪಾತ್ರ ಬಂದಿದೆ ಎಂಬುದನ್ನು ಹಾಡಿನ ಮುಖಾಂತರವೇ ಪರಿಚಯಿಸಿದ್ದಾರೆ. ಪರಂಪರೆ ಪದವನ್ನು ನಾಟಕಕಾರರು ಶ್ಲೇಷಾತ್ಮಕವಾಗಿ ಬಳಸಿದ್ದಾರೆ.

ಬಡೇಮಿಯಾನು ಸಹ ತಾನು ಶ್ರೀಮಂತನಾಗಿದ್ದರೆ ಹೇಗಿರುತ್ತದೆ ಎಂಬುದನ್ನು ಹಾಡಿನ ಮುಖಾಂತರವೇ ಹೇಳುತ್ತಾನೆ. ಮತ್ತು ಬಡೇಮಿಯಾ ಮತ್ತು ಕಲ್ಯಾಭ್ಯಾರ ಸಂಭಾಷಣೆಯ ಹಾಸ್ಯಮಯವಾಗಿ ಬರುವಂತೆ ಬಳಸಿ ಕೊಂಡಿದ್ದಾರೆ.

---

೧: ಜ. ಚ. (ಪುಟ-೮೭)

೨: ಜ.ಚ. (ಪುಟ-೮)

## ರಾವಿ ನದಿಯ ದಂಡೆಯಲ್ಲಿ – ನಾಟಕದಲ್ಲಿ ಕಂಡು ಬರುವ 'ಪಾತ್ರ ಚಿತ್ರಣ' ಮತ್ತು 'ತಂತ್ರ'ಗಳು

ಈ ನಾಟಕದಲ್ಲಿ ಸುಮಾರು ೧೬ ಪಾತ್ರಗಳು ಬರುತ್ತವೆ. ಅದರಲ್ಲಿ ಮುಖ್ಯವಾದದ್ದು ನಾಲ್ಕು-ಐದು ಪಾತ್ರಗಳು.

ರತನ್ ತಾಯಿ ನಾಟಕದಲ್ಲಿ ಬಹಳ ಮುಖ್ಯವಾದಂತಹ ಪಾತ್ರ. ರತ್ನದ ವ್ಯಾಪಾರಿ ರತನ್‌ನ ತಾಯಿ ಲಾಹೋರ್‌ನ ಬಂಗಲೆಯಲ್ಲಿ ತನ್ನ ಮಗ, ಸೊಸೆ ಮೊಮ್ಮಕ್ಕಳು ಬರುತ್ತಾರೆಂಬ ನಿರೀಕ್ಷೆಯಲಿರುವಾಗ ಸಿಕಂದರ್ ಮಿರ್ಜಾ ಕುಟುಂಬದವರು ಆ ಮನೆಗೆ ಬರುತ್ತಾರೆ. ಅವರನ್ನು ಮನೆಯಿಂದ ಹೊರಗೆ ಹೋಗಬೇಕೆಂದು ಹೇಳಿ ಆಕ್ರೋಶಗೊಳ್ಳುತ್ತಾಳೆ. ಸಿಕಂದರ್ ಪರಿವಾರದವರೂ ಅವಳನ್ನು ಹೊರ ಕಳಿಸಲು ಅನೇಕ ಪಿತೂರಿಗಳನ್ನು ಮಾಡಿದರೂ ಅದನ್ನೆಲ್ಲಾ ಸಹಿಸಿಕೊಂಡು ತನ್ನ ಮಕ್ಕಳಂತೆ ಕಾಣುತ್ತಾಳೆ. ರತನ್ ತಾಯಿ ತೋರಿಸಿದಂತಹ ಪ್ರೀತಿ, ವಿಶ್ವಾಸಕ್ಕೆ ಎಲ್ಲರೂ ಮಾರುಹೋಗಿ 'ಅಮ್ಮ' ಎಂದಲೇ ಕರೆಯಲಾರಂಭಿಸುತ್ತಾರೆ.

ರತನ್ ತಾಯಿಯನ್ನು ಮನೆಯಿಂದ ಓಡಿಸಲು ಉಪಾಯವನ್ನು ಮಾಡುತ್ತಾರೆ. ಅದನ್ನು ಹೇಳಲು ತನ್ನೋ ರತನ್ ತಾಯಿಯನ್ನು 'ಅಜ್ಜಿ' ಎಂದಾಗ ಮೊಮ್ಮಗಳನ್ನೇ ಕಂಡ ಹಾಗೆ ಅವಳಿಗೆ ಆಗುತ್ತದೆ. ಅವಳನ್ನು ದೂರತಳ್ಳಲು ಪ್ರಯತ್ನಿಸುತ್ತಿದ್ದಾಗ ರತನ್ ತಾಯಿ ಮಾತ್ರ ಎಲ್ಲರೂ ತಮ್ಮವರೇ ಎಂದು ಭಾವಿಸುತ್ತಿರುತ್ತಾಳೆ.

**"ಈ ಬಂಗ್ಲೆ ನಿಮ್ಮ ಹೆಸರಿಗೆ ಅಲಾಟಾಗಿದೆ. ನೀವು ಇಲ್ಲಿರಬೇಡಿ ಅಂತ ಯಾರು ತಡೆದಿದ್ದಾರೆ.. ನಾನು ಈ ಬಂಗ್ಲೆಯಲ್ಲಿ ಇರುತ್ತೀನಿ"**[೧] ಎಂದು ಹೇಳುತ್ತಾಳೆ. ತನ್ನ ಬಂಗಲೆಯಲ್ಲೇ ಮುಸ್ಲಿಂ ಕುಟುಂಬವೊಂದಕ್ಕೆ ಆಶ್ರಯಕೊಟ್ಟು ಅವರನ್ನ ತನ್ನ ಮಕ್ಕಳಂತೆ ಕಾಣುವ ಉದಾತ್ತತೆಯನ್ನು ಕಾಣುತ್ತೇವೆ. ಅವರ ಮನೆಯವರಿಗೆ ಔಷಧಿಯನ್ನು ಮಾಡಿಕೊಡುತ್ತಾಳೆ. ಹಮೀದಾಬೇಗಂಗೆ 'ಅಮ್ಮ' ಅಂತಲೇ ಕರಿ. ನಾನು ನಿನ್ನ ತಾಯಿ ಸಮಾನ ಎನ್ನುತ್ತಾಳೆ. ಲಾಹೋರ್ ಪಟ್ಟಣವೇ ಅವಳ ಪ್ರಪಂಚ. ಲಾಹೋರ್‌ರಷ್ಟು ದೊಡ್ಡ ಪಟ್ಟಣ ಇಡೀ ಹಿಂದೂಸ್ತಾನದಲ್ಲೇ ಇಲ್ಲ ಎಂದು ಹೇಳುತ್ತಾಳೆ. ಹಿಂದೂ ಹೆಂಗಸೊಬ್ಬಳು ಪಾಕಿಸ್ತಾನದಲ್ಲೇ ಉಳಿಯಬೇಕು, ಇಲ್ಲೇ ಸಾಯ ಬೇಕು ಎಂಬುದು ಆಶಯವಾಗಿ ಕಂಡುಬರುತ್ತದೆ. ಆ ಊರಿನಲ್ಲಿ ಏನೇನು ಸಿಗುತ್ತದೆ, ಏನು ಸಿಗುವುದಿಲ್ಲ ಎಂಬ ವಿವರಣೆಯನ್ನು ಎಲ್ಲರಿಗೂ ಕೊಡುತ್ತಿರುತ್ತಾಳೆ.

ಮಗನಿಗಾಗಿಯೇ ಜೀವ ಉಳಿಸಿಕೊಂಡಿರುವಂತಹ ರತನ್ ತಾಯಿಗೆ ಒಮ್ಮೊಮ್ಮೆ ಮಗನೂ ಬದುಕಿಲ್ಲ ಎಂಬ ಶಂಕೆಯೂ ಮೂಡಿ ಬಂದರೂ ಆಶಾವಾದದಿಂದ ಕಾಯುತ್ತಿರುತ್ತಾಳೆ. ಊರಿನಲ್ಲಿ ಖಾಯಿಲೆ ಬಂದಂತಹ ಜನರಿಗೆ ಔಷಧಿ ತಯಾರಿಸಿಕೊಡುವುದು, ಅವರ ಸೇವೆ ಮಾಡುವುದರಲ್ಲಿ ಕಾಲಕಳೆಯುತ್ತಿರುತ್ತಾಳೆ.

---

೧: ರಾ.ನ.ದ. (ಪುಟ-೧೭)

ದೀಪಾವಳಿ ಹಬ್ಬವನ್ನು ಇಸ್ಲಾಂಧರ್ಮದವರೊಂದಿಗೆ ಆಚರಿಸಿ, ಸರ್ವಧರ್ಮ ಸಮನ್ವಯವನ್ನು ಸಾರುತ್ತಾಳೆ. ತನ್ನನ್ನು ಕಾಪಾಡಲು ಮಿರ್ಜಾ ಕುಟುಂಬದವರಿಗೆ ಆಗುವಂತಹ ಕಷ್ಟ ನೆನೆಸಿಕೊಂಡು, ತನ್ನ ಮನೆಯನು ತೊರೆಯಲು ನಿರ್ಧಾರ ಮಾಡುವ ನಿಸ್ವಾರ್ಥ ಹೆಂಗಸಾಗಿ ಕಾಣುತ್ತಾಳೆ. ಕೊನೆಗೆ ಎಲ್ಲರ ಪ್ರೀತಿಗೆ ಮಾರುಹೋಗಿ ಅಲ್ಲೇ ಉಳಿದು ಕೊನೆ ಉಸಿರೆಳೆಯುತ್ತಾಳೆ. ಇವಳ ಅಂತ್ಯ ಸಂಸ್ಕಾರವನ್ನು ಹಿಂದೂ ಪದ್ಧತಿಯಂತೆ ಮಾಡಿದ ಇಸ್ಲಾಂ ಜನಾಂಗದವರಲ್ಲಿ ಕೋಮು ಸೌಹಾರ್ದತೆಯನ್ನು ಕಾಣುತ್ತೇವೆ.

ಸಿಕಂದರ್ ಮಿರ್ಜಾ, ನಾಟಕದ ಮತ್ತೊಂದು ಪಾತ್ರ. ಇಸ್ಲಾಂಧರ್ಮದ ಅನುಯಾಯಿಯಾದರೂ, ರತನ್ ತಾಯಿಯು ತೋರಿಸಿದಂತಹ ಪ್ರೀತಿ, ಸ್ನೇಹ, ಮಮತೆಯಿಂದಾಗಿ ಅವರೊಡಗೂಡಿ ದೀಪಾವಳಿ ಹಬ್ಬವನ್ನು ಆಚರಿಸುತ್ತಾರೆ.

ಲಾಹೋರ್‌ನಲ್ಲಿ ತಮಗೆ ಅಲಾಟ್ ಆದ ಬಂಗ್ಲೆಗೆ ಬಂದಂತಹ ಮಿರ್ಜಾ ರತನ್ ತಾಯಿಯನ್ನು ನೋಡಿ, ಅವರನ್ನು ಹಿಂದೂಸ್ತಾನಕ್ಕೆ ಹೋಗಲು ಪ್ರೇರೇಪಿಸುತ್ತಾನೆ. ಅದಕ್ಕೆ ಒಪ್ಪದಿದ್ದಾಗ ನಿಮ್ಮನ್ನು ಮತಾಂತರ ಮಾಡುತ್ತಾರೆಂದು ಹೇಳಬಹುದು ಎಂದು ಉಪಾಯ ಮಾಡುತ್ತಾರೆ. ಅದಕ್ಕೂ ಒಪ್ಪದ ರತನ್‌ತಾಯಿಯನ್ನು ಮುಗಿಸಬೇಕೆಂದು ಕ್ರೌರ್ಯ ಕೆಲಸಕ್ಕೆ ಕೈ ಹಾಕುತ್ತಾರೆ.

**"ಈ ಮುದುಕಿ ನಮ್ಮ ಹಾದೀಲಿ ಮುಳ್ಳನಂತಿದ್ದಾಳೆ, ಈ ಮುಳ್ಳನ್ನು ತೆಗೆದು ಒಗೆದರೆ ಅಲ್ಲಿಗೆ ನಮ್ಮ ದಾರಿ ಸುಗಮವಾಗುತ್ತೆ"**[೧] ಎಂದಾಗ ಹಮೀದ್ ಬೇಗಂ ಈ ಕ್ರೌರ್ಯವನ್ನು ತಡೆಯುತ್ತಾಳೆ. ಅಷ್ಟರಲ್ಲಿ ಪೈಲ್ವಾನ್ ಮುದುಕಿಯನ್ನು ಓಡಿಸಲು ಅದೇ ಮನೆಗೆ ಮತ್ತೊಂದು ಇಸ್ಲಾಂ ಕುಟುಂಬವನ್ನು ಕರೆತಂದಾಗ ರತನ್ ತಾಯಿಯನ್ನು ರಕ್ಷಿಸುವುದಕ್ಕೆ ಮುಂದಾಗುತ್ತಾನೆ. ರತನ್ ತಾಯಿಯನ್ನು 'ಕಾಫಿರ್' ಎಂದ ಮನುಷ್ಯ ಅವಳ ರಕ್ಷಣೆಗೆ ನಿಲ್ಲುತ್ತಾನೆ. ಪ್ರೀತಿಯಿಂದ ಯಾರನ್ನಾದರೂ ಗೆಲ್ಲಬಹುದೆಂಬುದನ್ನು ಇಲ್ಲಿ ಕಾಣಬಹುದು.

ರತನ್ ತಾಯಿಯೊಡಗೂಡಿ ಹಿಂದೂ ಹಬ್ಬವಾದ ದೀಪಾವಳಿಯನ್ನು, ದೀಪ ಹಚ್ಚುವ ಮುಖಾಂತರ ಆಚರಿಸಿ, ಸಿಹಿ ತಿಂದು ಸಂಭ್ರಮ ಪಡುತ್ತಾರೆ. ಮೌಲ್ವಿಯ ಬಳಿ ಮಿರ್ಜಾರವರು ರತನ್‌ತಾಯಿ ದೀಪಾವಳಿ ಆಚರಿಸಿದ್ದರ ಬಗ್ಗೆ ಅವರ ಪರವಾಗಿ ಮಾತಾಡುತ್ತಾರೆ. ಮಿರ್ಜಾ ಕುಟುಂಬಕ್ಕೆ ತೊಂದರೆಯಾಗುತ್ತಿದೆ ಎಂಬ ಕಾರಣಕ್ಕೆ ರತನ್ ತಾಯಿಯು ಮನೆಬಿಟ್ಟು ಹೊರಡಲು ತೀರ್ಮಾನಿಸಿದಾಗ, **"ನೀವು ನಿಮ್ಮ ಮಗ, ಸೊಸೆ, ಮೊಮ್ಮಕ್ಕಳ ಜತೆ ಇರೋದೇ ನಿಮ್ಮ ಕರ್ತವ್ಯ"**[೨] ಎಂದು 'ಅಮ್ಮ' ನನ್ನು ಅಲ್ಲೇ ಉಳಿಸಿಕೊಳ್ಳುತ್ತಾರೆ. ಅನಂತರದಲ್ಲಿ 'ಅಮ್ಮ'ನ ಕಳೇಬರಹವನ್ನು ಹಿಂದೂ ಸಂಸ್ಕೃತಿಯಂತೆ ಸಂಸ್ಕಾರ ಮಾಡಲು ನೆರವಾಗುತ್ತಾರೆ. ಇದು ಅಮ್ಮನಿಗೆ ಮತ್ತು ಹಿಂದೂ ಧರ್ಮಕ್ಕೆ ತೋರಿಸಿದಂತಹ ಗೌರವವೇ ಆಗಿದೆ.

---

೧: ಜ.ಚ. (ಪುಟ-೨೯)

೨: ರಾ.ನ.ದ. (ಪುಟ-೬೭)

ಮಿರ್ಜಾ ಪ್ರಾರಂಭದಲ್ಲಿ ಇದ್ದಂತಹ ಕ್ರೌರ್ಯವನ್ನು ಬಿಟ್ಟು 'ಅಮ್ಮ'ನ ವಾತ್ಸಲ್ಯದ ಮಗನಾಗಿ, ಅಮ್ಮನ ಶವವನ್ನು ಸಂಸ್ಕಾರ ಮಾಡುವ ಕರ್ತವ್ಯ ಪಾಲಕನಾದ ಮಗನಂತೆ ಕಂಡುಬರುತ್ತಾನೆ.

ಹಮೀದಾ ಬೇಗಂ, ಸಿಕಂದರ್ ಮಿರ್ಜಾರವರ ಪತ್ನಿ. ಪತಿಗೆ ತಕ್ಕ ಹೆಂಡತಿ ಮತ್ತು ತನ್ನ ಮಕ್ಕಳನ್ನು ಕಾಪಾಡುವ ರಕ್ಷಕಿಯಾಗಿ ಕೊನೆಯಲ್ಲಿ 'ಅಮ್ಮ'ಳಿಗೆ ನೆಚ್ಚಿನ ಸೊಸೆಯಾಗಿ ಕಾಣುತ್ತಾಳೆ.

ಆರಂಭದಲ್ಲಿ 'ರತನ್ ತಾಯಿ'ಯನ್ನು ಹೊರಗೆ ಕಳಿಸಬೇಕೆಂಬ ಹಂಬಲವಿದ್ದಿತು. ಅದಕ್ಕೆ ವಿರೋಧಿಸಿದ ರತನ್ ತಾಯಿಗೆ "ಕಲ್ಲು ಹೃದಯದ ಹೆಂಗಸು, ದೆವ್ವ" ಎಂದು ಕರೆದಿರುತ್ತಾಳೆ. ನಂತರದಲ್ಲಿ ಮಿರ್ಜಾರವರು ಅವಳನ್ನು ಕೊಲ್ಲಲು ನಿರ್ಧರಿಸಿದಾಗ ತನ್ನ ಮಕ್ಕಳಿಗೆ ಅದರಿಂದ ತೊಂದರೆ ಆಗಬಹುದೆಂದು ಗಂಡನನ್ನು ತಡೆದು ಮಕ್ಕಳ ರಕ್ಷಕಿಯಾಗುತ್ತಾಳೆ. ಕೊನೆಯಲ್ಲಿ ರತನ್ ತಾಯಿಯನ್ನು ತೊಂದರೆಯಿಂದ ರಕ್ಷಿಸಲು ಹವಣಿಸುವಾಗ ಹೆಣ್ಣಾಗಿ ಮತ್ತೊಬ್ಬ ಹೆಣ್ಣನ್ನು ಕಾಪಾಡುವಳಾಗಿ ಕಂಡುಬರುತ್ತಾಳೆ. ಇಲ್ಲಿ ಹಿಂದೂ-ಮುಸ್ಲಿಂ ಎಂಬ ಜಾತಿವಾದವು ಕಾಣದೆ, ಮಾನವತೆಯ ಧರ್ಮ ಎತ್ತಿ ಹಿಡಿಯುವಳಂತೆ ಕಾಣುತ್ತಾಳೆ.

ಜಾವೆದ್, ತನ್ನೊ ಇಬ್ಬರೂ ಮಿರ್ಜಾ ಕುಟುಂಬದ ಮಕ್ಕಳು. ತನ್ನೊ ಪಾತ್ರದ ಮುಖಾಂತರ ದೇಶದಲ್ಲಿ ನಡೆಯುತ್ತಿರುವ ಕ್ರೌರ್ಯದ ಬಗ್ಗೆ ಪ್ರಶ್ನೆ ಮೂಡಿಸುತ್ತಾರೆ ನಾಟಕಕಾರರು. ಆದರೂ ಅದಕ್ಕೆ ಉತ್ತರ ಮಾತ್ರ ಸಿಗುವುದಿಲ್ಲ.

'ತನ್ನೊ' ರತನ್ ತಾಯಿಗೆ ಪ್ರಿಯವಾದ ಮೊಮ್ಮಗಳು. ಮೊದಲಿಗೆ ತಮ್ಮ ಲಾಭಕ್ಕಾಗಿ ಅವಳನ್ನು ಅಜ್ಜಿ ಎಂದು ಕರೆದವಳು ತದನಂತರದಲ್ಲಿ ಮನಃಪೂರ್ವಕವಾಗಿ ಹಿಂದೂ ಹೆಂಗಸೊಬ್ಬಳನ್ನು 'ಅಜ್ಜಿ' ಎಂದು ಕರೆಯುತ್ತಾಳೆ. ಇವಳ ಮುಖಾಂತರ ರತನ್ ತಾಯಿ ತನ್ನ ಮೊಮ್ಮಗಳನ್ನು ಕಾಣುತ್ತಿರುತ್ತಾಳೆ. 'ಜಾವೇದ್' ಪ್ರಾರಂಭದಲ್ಲಿ ರತನ್ ತಾಯಿಯನ್ನು ಮನೆಬಿಟ್ಟು ಓಡಿಸಲು ಪೈಲ್ವಾನ್‌ಗೆ ಹೇಳುವುದಕ್ಕೆ ಹೋದರೂ, ತದನಂತರದಲಿ 'ಅಜ್ಜಿ'ಯ ರಕ್ಷಣೆಗೆ ನಿಲ್ಲುತ್ತಾನೆ. ರತನ್ ತಾಯಿ ಮನೆ ಬಿಡಲು ಹೊರಟಾಗ ಮೊಮ್ಮಗನಾಗಿ ಅವರನ್ನು ತಡೆದು ನಿಲ್ಲಿಸುತ್ತಾನೆ.

**"ತನ್ನೊ: ಅಮ್ಮ ಇದೆಲ್ಲ ಆದದ್ದಾದರೂ ಯಾಕಾಗಿ?**

**ಹ.ಬೇ : ಯಾವುದು ಮಗಳೇ?**

**ತನ್ನೊ: ಅದೇ ಪಾಕಿಸ್ತಾನ, ಹಿಂದೂಸ್ತಾನ.**

**ತನ್ನೊ: ನಾವು ಪಾಕಿಸ್ತಾನಕ್ಕೆ ಯಾಕೆ ಬಂದೆವು?**

**"ಅಮ್ಮ, ನಾವು ಮತ್ತು ಅಮ್ಮ ಒಂದೇ ಮನೇಲಿ ಇರಬಹುದಾದರೆ, ಹಿಂದುಸ್ತಾನದಲ್ಲಿ ಹಿಂದೂಗಳು ಮುಸಲ್ಮಾನರು ಒಟ್ಟಿಗೆ ಯಾಕೆ ಇರೋಕಾಗಲ್ಲ?"**[೧]

ಇದು ತನ್ನೊ ಮತ್ತು ಹಮೀದಾ ಬೇಗಂರ ನಡುವಿನ ಸಂಭಾಷಣೆ.

---

೧: ರಾ.ನ.ದ. (ಪುಟ -೪೮)

ಈ ಪ್ರಶ್ನೆಗಳಿಗೆ ಉತ್ತರ ಯಾರು ಹೇಳುವುದಿಲ್ಲ. ಈ ಸಂಗತಿಯಿಂದ ನಮ್ಮ ದೇಶದ ದುರಂತವನ್ನು ಹೇಳುವ ಪ್ರಯತ್ನವನ್ನು ನಾಟಕಕಾರರು ಮಾಡಿದ್ದಾರೆ.

ಈ ನಾಟಕದಲ್ಲಿ ಕಂಡುಬರುವಂತಹ ಮುಖ್ಯ ಪಾತ್ರಗಳೆಂದರೆ ಮೌಲ್ವಿಗಳು ಮತ್ತು ನಾಸಿರ್. ಮೌಲ್ವಿ- ಇಸ್ಲಾಂ ಮಸೀದಿಯ ಧರ್ಮಗುರು. ನಾಸಿರ್ ಕವಿಗಳು, ಪ್ರಪಂಚವೇ ಮುಳುಗಿಹೋಯಿತು ಎಂದುಕೊಳ್ಳುವಾಗ ಅವರ ಕವಿತೆ ಮುಖಾಂತರ ಜಗತ್ತು ಎಷ್ಟೊಂದು ಸುಂದರವಾಗಿದೆ ಎಂದು ತಿಳಿಸುತ್ತಾರೆ. ಇದು ಓದುಗರಿಗೆ ಒಂದು ಆಶಾದಾಯಕವೆಂಬಂತೆ ಕಂಡು ಬರುತ್ತದೆ.

ಮೌಲ್ವಿಗಳ ಬಳಿ ಪೈಲ್ವಾನ್, ರತನ್ ತಾಯಿಯ ಬಗ್ಗೆ ದೂರು ಹೇಳುತ್ತಾನೆ. ಅವಳನ್ನು ಓಡಿಸಬೇಕು ಎಂದಾಗ ಮೌಲ್ವಿಗಳು **"ನೀವು ನೆಲದಮೇಲಿರುವರ ಬಗ್ಗೆ ಅನುಕಂಪ ತೋರಿದರೆ ಆಕಾಶದ ಮೇಲಿರುವವ ನಿಮ್ಮ ಬಗ್ಗೆ ಅನುಕಂಪ ತೋರುತ್ತಾನೆ".**

**"ಮನಸ್ಸಿನಲ್ಲಿರೋ ವಿಕಾರಗಳೊಂದಿಗೆ ಹೋರಾಡುವವನೇ ನಿಜವಾದ ಧರ್ಮೋದ್ಧಾರಕ".**

**"ಪ್ರತಿಯೊಬ್ಬರಿಗೂ ಪೂಜೆ ಮಾಡುವ ಹಾಗೂ ತಮ್ಮ-ತಮ್ಮ ದೈವಗಳನ್ನು ಪೂಜಿಸುವ ಹಕ್ಕಿದೆ"** ಎಂದು ಖುರಾನ್‌ನಲ್ಲಿರುವ ನಿಜವಾದ ಸಂಗತಿಗಳನ್ನು ಹೇಳಿ, ರತನ್ ತಾಯಿಯು ಪಾಕಿಸ್ತಾನದಲ್ಲಿ ತನ್ನ ಇಚ್ಛೆಯಂತೆ ಇರಲು ಒಪ್ಪಿಗೆ ಕೊಡುತ್ತಾರೆ. ನಿಜವಾದ ಧರ್ಮ ಗುರುವಿನ ಕಾರ್ಯವನ್ನು ಮಾಡುತ್ತಾರೆ ಮೌಲ್ವಿಗಳು.

ರತನ್ ತಾಯಿಯ ಕಳೆಬರಹವನ್ನು ಹಿಂದೂ ಸಂಸ್ಕೃತಿಯಂತೆ ಸಂಸ್ಕಾರ ಮಾಡಲು ಹೇಳಿದ ಧರ್ಮಗುರುವನ್ನು, ಕೊಲ್ಲುತ್ತಾರೆ. ಸಮಾಜದ ಒಳಿತಿಗಾಗಿ ದುಡಿಯುವರ ಬದುಕು ದುರಂತದಲ್ಲೇ ಕೊನೆಗಾಣುವುದು.

ಇನ್ನೂ ನಾಸಿರ್ ಪಾತ್ರದ ಮುಖಾಂತರ ಸಮಾಜದ ಕ್ರೌರ್ಯ ಮತ್ತು ಸುಂದರತೆ ಎರಡನ್ನು ಲೇಖಕರು ಚಿತ್ರಿಸಿದ್ದಾರೆ. ಇದು ಒಂದು ರೀತಿಯ ವಿಡಂಬನೆಯಂತಿದೆ. ನ್ಯಾಯಪರವಾಗಿ ನಿಲ್ಲುವ ಕವಿ ನಾಸಿರ್ ವಿಶಾಲ ಹೃದಯಿಯಂತೆ ಕಾಣುತ್ತಾರೆ.

**"ಊರಿಗೆ ಊರೇ ಹತ್ತಿ ಉರಿಯುತ್ತಿದ್ದರೂ ನೋಡಿ**
**ನಲಿವು ಚೆಲುವುಗಳು ಹೇಗೆ ಮೆರೆದಿಹವು ನೋಡಿ**
**..................................................................**
**ಹೆಣ್ಣುಗಳ ಮಾನ ಮೂರಾಬಟ್ಟೆಯಾದದ್ದ**
**..................................................................**
**ಕಾಲ ಪ್ರವಾಹದಲ್ಲಿ ಕೊಚ್ಚಿಹೋಗಿಹ"**[೧]
ಎಂಬ ಹೃದಯಘಾತುಕ ಚಿತ್ರಣ ತಂದರೆ ಮತ್ತೊಂದು ಕಡೆ

೧: ರಾ.ನ.ದ. (ಪುಟ-೨೦)

"ದುಃಖ ನೀಡದಿರು ಯಾರಿಗೂ ನೀನು

ಸುಖ ಬೇಕಾದರೆ ನಿನಗೆ, ಬಯಸು ಸುಖವನ್ನು ಎಲ್ಲರಿಗೂ ನೀನು"[೧]

ಎಂದು ಪೈಲ್ವಾನ್‌ನಲ್ಲಿರುವ ಕೆಟ್ಟ ನಡವಳಿಕೆಯನ್ನು ತಿದ್ದುವ ಪ್ರಯತ್ನ ಮಾಡುತ್ತಾರೆ.

ಇವರ ಕವಿತೆ ಮುಖಾಂತರವೇ ಇವರ ವ್ಯಕ್ತಿತ್ವವನ್ನು ಅಳೆಯಬಹುದಾಗಿದೆ. ಸಮಾಜದ ಬದಲಾವಣೆಯನ್ನು ಬಯಸುವಂತಹ ವಿಚಾರ ಪರವಾದ ಪಾತ್ರ ಇದಾಗಿದೆ.

'ಪೈಲ್ವಾನ್' ಹೆಸರೇ ಹೇಳುವಂತೆ ಇವನು ಪೈಲ್ವಾನೇ. ನಾಟಕದುದ್ದಕ್ಕೂ ಮೊದಲಿನಿಂದ ಕೊನೆಯ ತನಕ ಕಂಡುಬರುವಂತಹ ಏಕೈಕ ಖಳನಾಯಕನ ಪಾತ್ರ ಪೈಲ್ವಾನ್‌ದು ಪಾಕಿಸ್ತಾನದಲ್ಲಿ ಯಾರೊಬ್ಬ ಹಿಂದೂ ಇಲ್ಲದಂತೆ ನೋಡಿಕೊಳ್ಳುವಲ್ಲಿ ಪೈಲ್ವಾನ್ ಮತ್ತು ಅವರ ಸಂಗಡಿದವರ ಕೈವಾಡವಿದೆ. ಅಪ್ಪಿ-ತಪ್ಪಿ ಉಳಿದುಕೊಂಡಂತಹ ಹಿಂದೂಹೆಂಗಸಾದ 'ರತನ್‌ತಾಯಿ'ಯನ್ನು ಓಡಿಸಬೇಕೆಂಬುದೇ ಅವನ ಮುಖ್ಯ ಗುರಿಯಾಯಿತು. ಅದಕ್ಕಾಗಿ ಜಾವೇದ್, ಸಿಕಂದರ್ ಮಿರ್ಜಾ, ನಾಸಿರ್, ಮೌಲ್ವಿಗಳಲ್ಲೆರನ್ನೂ ಎತ್ತಿಕಟ್ಟಿದರೂ ಪ್ರಯೋಜನವಾಗದಿದ್ದಾಗ, ಮತ್ತು ರತನ್ ತಾಯಿಯ ಶವವನ್ನು ಸಂಸ್ಕಾರ ಮಾಡಿದಾಗ ಇದು ಇಸ್ಲಾಂ ಧರ್ಮಕ್ಕೆ ಆದಂತಹ ಅವಮಾನ ಅದಕ್ಕಾಗಿ ಸೇಡುತೀರಿಸಿ ಕೊಳ್ಳಲು ಮೌಲ್ವಿಯನ್ನು ಹತ್ಯೆಮಾಡುತ್ತಾನೆ. ಎಲ್ಲರೂ ಹಿಂದೂ-ಮುಸ್ಲಿಂ ಕೋಮು ಸೌಹಾರ್ದತೆಯನ್ನು ಕಾಪಾಡು ಪ್ರಯತ್ನಿಸಿದರೆ, ಪೈಲ್ವಾನ್ ಕೋಮುಗಲಭೆಯನ್ನು ಪ್ರತಿಪಾದಿಸುತ್ತಾನೆ.



## ನಾಟಕಕ್ಕೆ ಅಳವಡಿಸಿದಂತಹ 'ತಂತ್ರ':

ನಾಟಕವು ಸರಳ ಸುಂದರವಾಗಿ ಮೂಡಿದೆ. ಹೇಳಬೇಕಾದಂತಹ ವಿಷಯವನ್ನು ನೇರವಾಗಿ ಹೇಳಿದ್ದಾರೆ. ಸರಳವಾದಂತ ನಾಟಕ ಇದಾದ್ದರಿಂದ 'ತಂತ್ರ'ಗಳು ಈ ನಾಟಕದಲ್ಲಿ ಬಳಕೆಯಾಗಿಲ್ಲ ಎಂದು ತಿಳಿಯಬಹುದು.

* * *

---

೧: ರಾ.ನ.ದ. (ಪುಟ-೪೧)

ಅಧ್ಯಾಯ – ೬

# ಮೂರು ನಾಟಕಗಳ ತೌಲಾನಿಕ ಅಧ್ಯಯನ

ಈ ಹಿಂದಿನ ಅಧ್ಯಾಯಗಳಲ್ಲಿ ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ, ರಾವಿ ನದಿಯ ದಂಡೆಯಲ್ಲಿ, ಜತೆಗಿರುವನು ಚಂದಿರ – ನಾಟಕಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗಿದೆ. ಪ್ರಸ್ತುತ ಈ ಅಧ್ಯಾಯದಲ್ಲಿ ಮೂರೂ ನಾಟಕಗಳಲ್ಲಿ ಕಂಡುಬರುವ ಸಾಮ್ಯತೆ, ಭಿನ್ನತೆ ಕುರಿತು ಅಧ್ಯಯನ ಮಾಡಲಾಗಿದೆ. ಯಾವುದೇ ನಾಟಕದ ಶ್ರೇಷ್ಠತೆ, ಅಂತಸತ್ವ, ವಿಶಿಷ್ಟತೆಗಳನ್ನು ಅರಿಯಬೇಕಾದರೆ, ಅದೇ ಹಿನ್ನಲೆಯಲ್ಲಿ ವಿನ್ಯಾಸಗೊಂಡಿರುವ ಮತ್ತೊಂದು ನಾಟಕದೊಡನೆ ಸಮೀಕರಿಸಿ ನೋಡಬೇಕಾಗುತ್ತದೆ. ಆಗಲೇ ನಾಟಕವೊಂದರಲ್ಲಿನ ಶ್ರೇಷ್ಠತೆ ತಿಳಿಯಲು ಸಾಧ್ಯವಾಗುತ್ತದೆ. ಅಧ್ಯಯನಕ್ಕೆ ತೆಗೆದುಕೊಂಡಿರುವ ಮೂರು ನಾಟಕಗಳಲ್ಲಿ ಮೇಲ್ನೋಟಕ್ಕೆ ವಸ್ತು ಒಂದೇ ಎಂದು ಗೋಚಸಿದರೂ, ಆಂತರ್ಯದಲ್ಲಿ ಹುದಿಗಿಸಿಟ್ಟಿರುವ ಸತ್ಯವು ಬೇರೆಯೇ ಆಗಿರುತ್ತದೆ. ಈ ಹಿನ್ನಲೆಯಲ್ಲಿ ಈ ಮೂರು ನಾಟಕಗಳನ್ನು ವಸ್ತು, ಪಾತ್ರ, ದೃಷ್ಟಿ ಹಾಗೂ ಅಭಿವ್ಯಕ್ತಿಯ ಅಧ್ಯಯನ ಮಾಡಲಾಗಿದೆ. ಇವುಗಳ ವಿವರವಾದ ವಿಶ್ಲೇಷಣೆಯೇ ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

## (ಅ) ವಸ್ತುವಿನ ದೃಷ್ಟಿಯಿಂದ :

ನಾಟಕದ ಮುಖ್ಯ ತಿರುಳು 'ವಸ್ತು'ವೇ ಆಗಿರುತ್ತದೆ. ನಾಟಕಕಾರರ ದೃಷ್ಟಿ, ಧೋರಣೆಗಳು ವಸ್ತುವಿನಲ್ಲಿ ಅಡಕಗೊಂಡಿದ್ದು, ಪಾತ್ರಗಳು, ಅಭಿವ್ಯಕ್ತಿ, ರಚನಾ ಕ್ರಮಗಳು ಅದನ್ನು ಸ್ಪಷ್ಟ ಪಡಿಸುತ್ತಾ ಹೋಗುತ್ತವೆ. ಆದ್ದರಿಂದ ನಾಟಕದಲ್ಲಿನ ವಸ್ತುವು ಮೂಲ ಅಂಶ ಎಂದು ಪರಿಗಣಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ 'ಜತೆಗಿರುವನು ಚಂದಿರ' ಮತ್ತು 'ರಾವಿ ನದಿಯ ದಂಡೆಯಲ್ಲಿ' ನಾಟಕಗಳ ವಸ್ತುವು ಒಂದೇ ಆಗಿ ಕಂಡುಬರುತ್ತದೆ. ಅನುವಾದ ನಾಟಕಗಳಾದ ಇವೆರಡು ಪ್ರಸ್ತುತದಲ್ಲಿ ದೇಶ ವಿಭಜನೆಯ ಸಮಸ್ಯೆಯನ್ನು ಕುರಿತು ಹೇಳಿದರೆ, 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ನಾಟಕವು ದೇಶವಿಭಜನೆಯಾದ ನಂತರದ ದೇಶದ ಸ್ಥಿತಿಯನ್ನು ಹೇಳುತ್ತದೆ. ಒಂದೇ ರೀತಿಯ ವಸ್ತುವಿನಲ್ಲಿ ಸೂಕ್ಷ್ಮವಾದ ವ್ಯತ್ಯಾಸಗಳನ್ನು ಕಾಣುವುದೂ ಮುಖ್ಯವಾಗುತ್ತದೆ.

ಮೂರು ನಾಟಕದ ವಸ್ತು ಹಿಂದೂ–ಮುಸ್ಲಿಂ ಕೋಮುಸೌಹಾರ್ದತೆಯನ್ನೇ ಹೇಳುತ್ತದೆ. 'ರಾವಿನದಿಯ ದಂಡೆಯಲ್ಲಿ' ನಾಟಕದಲ್ಲಿ ದೇಶ ವಿಭಜನೆಯಾದ ನಂತರ ಪಾಕಿಸ್ತಾನಕ್ಕೆ ಮುಸ್ಲಿಂ ಜನರನ್ನು, ಹಿಂದೂಗಳನ್ನು ಹಿಂದೂಸ್ತಾನಕ್ಕೆ ಕಳಿಸುವ ವ್ಯವಸ್ಥೆಯಾದ್ದರಿಂದ ಸಿಕಂದರ್ ಮಿರ್ಜಾ ಕುಟುಂಬವು ಪಾಕಿಸ್ತಾನಕ್ಕೆ ಹೋಗಿ ಅಲ್ಲಿಗೆ ತಮ್ಮನ್ನು ಹೊಂದಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ದೇಶ ವಿಭಜನೆಯ ನಂತರದ ವಸ್ತು ರಾವಿನದಿಯ ದಂಡೆಯಾದರೆ, ಜತೆಗಿರುವನು ಚಂದಿರ ನಾಟಕವು ದೇಶ ವಿಭಜನೆಯ ಸಂದರ್ಭದಲ್ಲಿ ಆಗುವಂತಹ ದಂಗೆಗಳು, ಹಿಂಸಾಚಾರಗಳು

ಆಗುವುದನ್ನು ಮತ್ತು ಇದರಿಂದ ದೇಶ ಹೇಗೆ ತತ್ತರಿಸಿತು ಎಂಬುದನ್ನು ತಿಳಿಸುತ್ತದೆ. ಅನುವಾದ ನಾಟಕವಾದರೂ ಭಾರತ ದೇಶದ ಸ್ಥಿತಿಗೆ ತಕ್ಕಂತೆ ಇದನ್ನು ಪರಿವರ್ತಿಸಿಕೊಂಡು, ಅಂದು ನಡೆಯುತ್ತಿದ್ದಂತಹ ಬಹುದೊಡ್ಡ ಸಮಸ್ಯೆ ಎಂದರೆ ಹಿಂದೂ-ಮುಸ್ಲಿಂ ಘರ್ಷಣೆ, ಇದನ್ನೇ ಎರಡು ನಾಟಕಗಳೂ ಹೇಳುತ್ತದೆ.

'ಚೂರಿ ಕಟ್ಟೆ ಅರ್ಥಾತ್ ಕಲ್ಯಾಣಪುರ' – ನಾಟಕವು ಇವೆರಡು ನಾಟಕದಂತೆಯೇ ಹಿಂದೂ-ಮುಸ್ಲಿಂ ಸೌಹಾರ್ದತೆಯನ್ನು ಹೇಳುತ್ತದೆ. ಸ್ವತಂತ್ರ ನಾಟಕವಾದ ಇದು, ಸ್ವಾತಂತ್ರ್ಯೋತ್ತರದ ನಾಟಕವಾಗಿದೆ. ಸ್ವಾತಂತ್ರ್ಯ ಬಂದು ಬಹಳ ವರ್ಷಗಳಾದರೂ, ದೇಶವೂ ಎಷ್ಟು ಪ್ರಗತಿಯನ್ನೊ ಸಾಧಿಸಿದರೂ, ಹಿಂದಿನಿಂದಲೂ ಇರುವಂತಹ ಹಿಂದೂ-ಮುಸ್ಲಿಂ ಕೋಮುವಾದಕ್ಕೆ ಅಂಟಿಕೊಂಡಿರುವುದನ್ನು ಹೇಳುತ್ತದೆ.

ಈ ಮೂರು ನಾಟಕಗಳ 'ವಸ್ತು' ಒಂದೇ ಆಗಿ ಸಾಮ್ಯತೆ ಕಂಡುಬಂದರೂ, ಅದರೊಳಗೆ ಅನೇಕ ವೈದೃಶ್ಯಗಳೂ ಕಂಡುಬರುತ್ತದೆ.

**"ಕನ್ನಡ ಸಾಹಿತ್ಯದ ಒಂದೂವರೆ ಸಾವಿರ ವರ್ಷದ ಇತಿಹಾಸದುದಕ್ಕೂ ಪರಧರ್ಮ ಸಹಿಷ್ಣುತೆ, ಧರ್ಮ ಸಮನ್ವಯ ಭಾವನೆಗಳನ್ನು ಕವಿಗಳು ತಮ್ಮ ಕೃತಿಗಳಲ್ಲಿ ವ್ಯಕ್ತ ಪಡಿಸುತ್ತಾ ಬಂದಿರುವುದನ್ನು ನಾವು ಕಾಣುತ್ತೇವೆ. ಇತ್ತೀಚಿನ ಅಂದರೆ ೧೯೭೨ ರಿಂದೀಚೆಗೆ ಕೋಮು ಸೌಹಾರ್ದತೆ, ಜಾತ್ಯಾತೀತತೆ, ಭಾವೈಕ್ಯತೆ, ವೈವಿಧ್ಯದಲ್ಲಿ ಏಕತೆ, ಸರ್ವಧರ್ಮ ಸಮನ್ವಯ, ಪರಧರ್ಮ ಸಹಿಷ್ಣುತೆ ಇತ್ಯಾದಿ ಮಾತುಗಳು ಪದೇ-ಪದೇ ಕೇಳಿ ಬರುತ್ತಿವೆ".**[೧]

ಮನುಷ್ಯ ಮನುಷ್ಯರ ಮಧ್ಯೆ ಭೇದದ ಸೌಧ ನಿರ್ಮಿಸಿದ ಜಾತಿಯ ಭೂತವನ್ನು ಒಡಿದೋಡಿಸಲು ನಮ್ಮ ಕನ್ನಡದ ಕವಿಗಳು ಶ್ರಮಿಸಿದ್ದಾರೆ. ಆದಿಕವಿ ಪಂಪ **'ಮನುಜ ಜಾತಿ ತಾನೊಂದೆವಲಂ'** ಎಂದರೆ, ರಾಷ್ಟ್ರಕವಿ ಕುವೆಂಪು ಅವರು;

**"ಗುಡಿ ಚರ್ಚು ಮಸೀದಿಗಳನ್ನು ಬಿಟ್ಟು ಹೊರಬನ್ನಿ**
**ಆಮತದ ಈ ಮತದ ಹಳೆ ಮತದ ಸಹವಾಸ**
**ಸಾಕಿನ್ನು ಸೇರಿರೈ ಮನುಜ ಮತಕ್ಕೆ**
**ಓ ಬನ್ನಿ, ಸೋದರರೆ ವಿಶ್ವಪಥಕ್ಕೆ"**

ಎಂದು ವಿಶ್ವಮಾನವ ತತ್ತ್ವವನ್ನು ಸಾರಿದ್ದಾರೆ. ಎಲ್ಲರೂ ಹೇಳಲು ಹೊರಟಿರುವುದು ಸರ್ವಧರ್ಮ ಸಮನ್ವಯ ಮತ್ತು ಮಾನವತಾವಾದವನ್ನೇ.

ಈ ಮೂರು ನಾಟಕಗಳಲ್ಲಿ ನಾಟಕಕಾರರು ಹೇಳಲು ಹೊರಟಿಸುವ 'ವಸ್ತು'ವು ಅದೇ ಆಗಿದೆ. ಯಾವುದೇ ನಾಟಕಕಾರರು ಯಾವುದೇ ಧರ್ಮದ ಪರವಾಗಿ ಅಥವಾ ವಿರೋಧವಾಗಿ ನಿಲ್ಲದೆ, ಧಾರ್ಮಿಕ ಸೌಹಾರ್ದತೆ, ಭ್ರಾತೃತ್ವದ ಪರವಾಗಿ ನಿಂತ್ತಿದ್ದಾರೆ.

---

**೧: ಕನ್ನಡ ಸಾಹಿತ್ಯ : ಕೋಮುಸೌಹಾರ್ದತೆ (ಡಾ.ವೈ.ಜಿ.ಪೂಜಾರ)**

"ರಾವಿನದಿಯ ದಂಡೆಯಲ್ಲಿ" ನಾಟಕದಲ್ಲಿ ದೇಶ ವಿಭಜನೆಯಾದ ನಂತರ ಇಸ್ಲಾಂ ಕುಟುಂಬವೊಂದು ಪಾಕಿಸ್ತಾನಕ್ಕೆ ತೆರಳಿ ಅಲ್ಲಿ ಅವರ ಜೀವನ ಚಿತ್ರಣವು ಕಂಡುಬರುತ್ತದೆ. ಹಿಂದೂ ಹೆಂಗಸೊಬ್ಬಳೊಂದಿಗೆ ಹೊಂದಿಕೊಳ್ಳಲಾಗದೆ ಅವಳನ್ನು ಕಾಫಿರ್ (ಮುಸ್ಲಿಂ ಧರ್ಮವಲ್ಲದ ಹೆಂಗಸು) ಎಂದು ಅವಳನ್ನು ವಿರೋಧಿಸುತ್ತಾ ಬಂದು ಕೊನೆಗೆ ಅವಳ ಪ್ರೀತಿ, ಸ್ನೇಹಕ್ಕೆ ತಲೆಬಾಗಿ ಸಹಬಾಳ್ವೆಯೊಂದಿಗೆ ಬಾಳುತ್ತಾರೆ. ಇಲ್ಲಿ ಹಿಂದೂ-ಮುಸ್ಲಿಂ ಎಂಬ ಜಾತಿವಾದ ಬಿಟ್ಟು **"ಮಾನವೀಯ ಧರ್ಮ"**ವು ದೊಡ್ಡದು ಎಂಬ ಕಲ್ಪನೆ ಕಂಡುಬರುತ್ತದೆ.

ಇಸ್ಲಾಂ ಪವಿತ್ರ ಗ್ರಂಥವಾದ 'ಖುರಾನ್'ನಲ್ಲಿ ನಿಜವಾಗಿ ಇಸ್ಲಾಂ ಧರ್ಮ ಏನನ್ನು ಹೇಳುತ್ತದೆ ಮತ್ತು ಇಸ್ಲಾಂಧರ್ಮಿ ಹೇಗಿರಬೇಕೆಂದು ಹೇಳಿರುವ ವಿಷಯವನ್ನು ನಾಟಕದಲ್ಲಿ ತಂದು, ಮನುಷ್ಯರು ಸಮಾಜದಲ್ಲಿ ಬದುಕಲು ಜಾತಿ, ಧರ್ಮಗಳು ಮುಖ್ಯವಲ್ಲ, ಪ್ರೀತಿಸುವ ಹೃದಯಗಳು ಮುಖ್ಯ ಎಂಬುದನ್ನು ಸಾರಿದೆ.

'ಜತೆಗಿರುವನು ಚಂದಿರ' ನಾಟಕವು ದೇಶವಿಭಜನೆಗೆ ಮುನ್ನ ನಡೆದಂತಹ ನಾಟಕ. ಭಾರತ ದೇಶದಲ್ಲೇ ನಡೆದಂತಹ ಸಂಗತಿಯನ್ನು ತಿಳಿಸುತ್ತದೆ. 'ಪರಂಪರೆಗೆ' ಜೋತು ಬಿದ್ದಂತಹ ಜನರು ಅದರಿಂದ ಹೊರಬರುವ ಪ್ರಯತ್ನವನ್ನು ಮಾಡುವುದಿಲ್ಲ. ಇಸ್ಲಾಂ ಧರ್ಮಕ್ಕೆ ನಿಷ್ಠರಾದಂತಹ ಜನರು ಹಿಂದೂ ಹುಡುಗನನ್ನು ಮದುವೆಯಾದ ಮಗಳನ್ನು ತಿರಸ್ಕರಿಸುತ್ತಾರೆ.

"ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ" ನಾಟಕವು ಸ್ವಾತಂತ್ರ್ಯೋತ್ತರ ನಾಟಕ ಅಂದರೆ ಪ್ರಸ್ತುತ ಸಮಾಜದ ಕಥೆಯನ್ನು ಹೇಳುತ್ತದೆ.

ಶ್ಯಾಮಭಟ್ಟರ ಮನೆಗೆ ಬಂದಂತಹ ಅನ್ವರ್ ತಾನೇ ಅನಂತ ಎಂದು ಹೇಳಿಕೊಂಡಾಗ ಅವನನ್ನು ಮಗ ಎಂದು ಸ್ವೀಕರಿಸುತ್ತಾರೆ. ತದ ನಂತರದಲ್ಲಿ ಅವನು ಅನ್ವರ್ ಎಂದು ತಿಳಿದಾಗಲೂ, ಮಗ ಎಂದು ಕೊಂಡಿದ್ದವನು ಮಗನಾಗೇ ಉಳಿಯಲಿ ಎಂಬ ಉದಾರ ಮನಸ್ಥಿತಿಯನ್ನು ಕಾಣುತ್ತೇವೆ.

"ಪ್ರಪಂಚದ ಎಲ್ಲಾ ಸಂಬಂಧಗಳೂ ನಿಂತಿರುವುದು ನಂಬಿಕೆಯ ಮೇಲೆ ಹೊರತು ಸತ್ಯದ ಮೇಲಲ್ಲ" ಎಂಬ ನೀತಿಯನ್ನು ಸಾರುತ್ತದೆ.

ಈ ಮೂರು ನಾಟಕಗಳಲ್ಲಿ ಸಾಮ್ಯತೆಯೂ, ವೈಷಮ್ಯವೂ ಕಂಡುಬರುತ್ತದೆ.

'ರಾವಿನದಿಯ ದಂಡೆಯಲ್ಲಿ' ಹಿಂದೂ-ಮುಸ್ಲಿಂ ಸೌಹಾರ್ದತೆಯಂತೆ ದೀಪಾವಳಿ ಹಬ್ಬದ ಆಚರಣೆ ಬಂದರೆ, ಜತೆಗಿರುವನು ಚಂದಿರದಲ್ಲಿ ಇಸ್ಲಾಂ ಧರ್ಮದ ಭಾವೈಕ್ಯತೆಯ ಪ್ರತೀಕ ರಂಜಾನ್ ಆಚರಣೆ, ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರದಲ್ಲಿ ಆ ಊರಿನ ಜಾತ್ರೆಯಾದ ಶಂಭುಲಿಂಗನ ಜಾತ್ರೆಯ ಪ್ರಸ್ತಾಪ ಬರುತ್ತದೆ. ಮತ್ತು ಪರಂಪರೆಯಿಂದಲೇ ಬದುಕು ಆರಂಭವಾಗಿ ಪರಂಪರೆಯಿಂದಲೇ ಬದುಕುಮುಕ್ತಾಯವಾಗುವುದನ್ನು ಜತೆಗಿರುವನು ಚಂದಿರದಲ್ಲಿ ಕಂಡುಬಂದರೆ, ಇದಕ್ಕೆ ವ್ಯತಿರಿಕ್ತವಾಗಿ ರಾವಿನದಿಯ ದಂಡೆಯಲ್ಲಿ ನಾಟಕದಲ್ಲಿ ಇಸ್ಲಾಂಧರ್ಮದ ಧರ್ಮಾಂಧತೆಯ ಪ್ರದರ್ಶನವಿದೆ. ಪರಂಪರೆ ಎಂಬ ಬೇಲಿಯನ್ನು ಹಾಕಿಕೊಂಡು ಅದರೊಳಗೆ

ಸಿಕ್ಕಿಹಾಕಿಕೊಂಡಂತಹದ್ದು ಮತ್ತೆ ತಮ್ಮ ಧರ್ಮವೇ ಶ್ರೇಷ್ಠ ಎಂದು ಹೇಳಿಕೊಳ್ಳುವ ನಿಟ್ಟಿನಲ್ಲಿ ಮತ್ತೊಂದು ಧರ್ಮದ ನಾಶವನ್ನೇ ಗುರಿಯಾಗಿಟ್ಟು ಕೊಂಡಿರುವುದನ್ನು ಹೇಳಿರುವ ಎರಡೂ ನಾಟಕಕ್ಕಿಂತಲೂ ಭಿನ್ನವಾಗಿ ಮತ್ತು ವಿಶಿಷ್ಟವಾದಂತಹದನ್ನು ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರದಲ್ಲಿ ಹೇಳಲಾಗಿದೆ. ನಂಬಿಕೆಯ ಮೇಲೆ ಸಂಬಂಧ ನಿಂತಿರುವುದು ಎಂಬ ಹೊಸ ಸಂದೇಶವನ್ನು ಸಮಾಜಕ್ಕೆ ಕೊಟ್ಟಿದ್ದಾರೆ.

ಮೌಲ್ವಿಯ ಮುಖಾಂತರ ಇಸ್ಲಾಂಧರ್ಮದ ಬಗ್ಗೆಗಿನ ತಪ್ಪು ಕಲ್ಪನೆಗಳನ್ನು ದೂರಮಾಡಿದ್ದಾರೆ. ನಿಜವಾದ ಇಸ್ಲಾಮಿ ಹೇಗಿರಬೇಕೆಂದು ಖುರಾನ್ ಹೇಳುತ್ತದೋ ಅದನ್ನು ಮೌಲ್ವಿಯ ಮುಖಾಂತರ ಮನದಟ್ಟನ್ನು ರಾವಿನದಿಯ ದಂಡೆಯಲ್ಲಿ ನಾಟಕದಲ್ಲಿ ಮಾಡಿಸಿದರೆ, ಜತೆಗಿರುವನು ಚಂದಿರ ನಾಟಕದಲ್ಲಿ ಶಕೂರ್ ಮಾಸ್ತರ್, ಅಜ್ಞಾನ ತುಂಬಿದ ಜನರಲ್ಲಿ ಪ್ರಜ್ಞಾವಂತಿಕೆಯ ಬೆಳಕನ್ನು ಚೆಲ್ಲುತ್ತಾನೆ ಮತ್ತು ದೇಶದ ವಿಭಜನೆಯ ಹೆಸರಿನಲ್ಲಿ ನಡೆಯುತ್ತಿದ್ದಂತಹ ಕೋಮುವಾದ ಮತ್ತು ಕೆಲವೇ ಸ್ವಾರ್ಥ ಜನರುಗಳಿಂದ ಆಗುತ್ತಿರುವ ಅನಾಹುತವನ್ನು ತಿಳಿಸುವ ಪ್ರಯತ್ನವಿದೆ. ಮತ್ತು ಆಧುನಿಕ ಸಮಾಜದಲ್ಲಿ, ನಾಗರಿಕರೆಂದು ಎನಿಸಿಕೊಂಡಿರುವ ಜನತೆಯೇ ಮಾಡುತ್ತಿರುವ ಅನಾಗರಿಕ ಕೃತ್ಯಗಳನ್ನು ಅತ್ಯಂತ್ಯ ವಿಡಂಬನಾತ್ಮಕವಾಗಿ ವಿಶ್ಲೇಷಿಸಿ, ಪ್ರಜ್ಞಾವಂತ ನಾಗರಿಕರ ಸಮಾಜದ ಕಲ್ಪನೆಯನ್ನು ಹೇಳಿದ್ದಾರೆ.

ಅಲ್ಲದೆ, ಮೂರು ನಾಟಕದಲ್ಲಿ ಸಮಾಜಕ್ಕೆ ಸಂದೇಶವನ್ನು ಕೊಡಲು ಹಾಡುಗಳ ಮುಖಾಂತರ, ಗಝಲ್‌ಗಳ ಮುಖಾಂತರ ತಂದಿದ್ದಾರೆ. ಮತ್ತು ಅಲ್ಲಲ್ಲಿ ಹಾಸ್ಯದ ಹೊನಲನ್ನು ಕಾಣಬಹುದು.

ರಾವಿನದಿಯ ದಂಡೆಯಲ್ಲಿ ನಾಟಕದಲ್ಲಿ ಗಝಲ್ ಮುಖಾಂತರ ಹಾಸ್ಯಮಯ ಸನ್ನಿವೇಶವನ್ನು ಸೃಷ್ಟಿಮಾಡಿದರೆ, ಅದೇ ಗಝಲ್‌ನಿಂದ ಸಮಾಜದ ವಾಸ್ತವದ ಚಿತ್ರಣವಾದ ಹಿಂಸೆಯನ್ನು ಹೇಳಿದ್ದಾರೆ. ಜತೆಗಿರುವನು ಚಂದಿರದಲ್ಲಿ ಮುಗ್ಧ ಜನರು ತಾವು ನಂಬಿಕೊಂಡಂತಹ ಪರಂಪರೆಯನ್ನು ಹಾಡಿನ ಮುಖಾಂತರ ಹೇಳಿದ್ದಾರೆ. ಇದು ಅಂದಿನ ಮುಸ್ಲಿಂ ಧರ್ಮದ ಒಳಗಿದ್ದ ಕಟ್ಟುಪಾಡನ್ನು ಹೇಳುವ ಪ್ರಯತ್ನ ಇಲ್ಲಿದೆ. ಮತ್ತು ಅಲ್ಲಲ್ಲಿ ಹಾಸ್ಯದ ಪ್ರಸಂಗಗಳು ಕಂಡುಬರುತ್ತದೆ.

'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ'ದಲ್ಲಿ ಪ್ರಾರಂಭ ಮತ್ತು ಅಂತ್ಯವು ಹಾಡಿನ ಮುಖಾಂತವೇ ಆಗುತ್ತದೆ. 'ಬದುಕು' ಜಾತಿ, ಧರ್ಮ, ಎಲ್ಲದಕ್ಕಿಂತಲೂ ಮುಖ್ಯ ಎಂಬುದನ್ನು ಮೂರು ನಾಟಕಗಳು ಹೇಳುತ್ತದೆ ಆದರೆ ಭಿನ್ನ-ಭಿನ್ನ ರೀತಿ ಮತ್ತು ಆಯಾಮಗಳೊಂದಿಗೆ ಹೇಳುತ್ತದೆ.

ಬದುಕನ್ನು ಸಾಗಿಸಲು ಜಾತಿ, ಧರ್ಮ, ಧರ್ಮಾಂಧತೆ, ಧರ್ಮನಿಷ್ಠತೆ ಮುಖ್ಯವಲ್ಲ, ಬದುಕನ್ನು ಸಾಗಿಸಲು ಪ್ರೀತಿ, ಸ್ನೇಹ, ಸೌಹಾರ್ದತೆ ಮುಖ್ಯ ಎಂಬುದನ್ನು ರಾವಿನದಿಯ ದಂಡೆಯಲ್ಲಿ, ನಾಟಕ ತಿಳಿಸಿದರೆ, ಜತೆಗಿರುವನು ಚಂದಿರ ನಾಟಕವು, ತಮ್ಮ ಜೀವನದ ತಳಹದಿಯಾದ ಪರಂಪರೆಯನ್ನು ತಳ್ಳಿಹಾಕಿ ಹೊಸ ಬದುಕಿನತ್ತ ಮುಖಮಾಡುವುದನ್ನು ತಿಳಿಸುತ್ತದೆ.

ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ'ದಲ್ಲಿ ತನ್ನವರೆನ್ನಲ್ಲಾ ಕಳೆದುಕೊಂಡು ಅಸಾಹಯಕನಾಗಿದ್ದ ಅನ್ವರ್, ಹಿಂದೂ ಮನೆಯೊಂದರಲ್ಲಿ ಆ ಮನೆಯ ಮಗ ಎಂದು ಆಶ್ರಯಿಸುತ್ತಾನೆ. ಇದು ಜಾತಿ, ಧರ್ಮ, ಸಂಬಂಧ, ಪ್ರೀತಿ, ಎಲ್ಲದಕ್ಕೂ ಮೀರಿದ್ದು ಬದುಕು ಎಂದು ತಿಳಿಸುತ್ತದೆ.

'ರಾವಿನದಿಯ ದಂಡೆಯಲ್ಲಿ' ಏಕೈಕ ಹಿಂದೂ ಪಾತ್ರವಾದ 'ರತನ್ ತಾಯಿ'ಯನ್ನು ಮೊದಲು ಎಲ್ಲರೂ ದ್ವೇಷಿಸಿದರೂ ಕೊನೆಗೆ ಅತ್ಯಂತ ಪ್ರೀತಿಯಿಂದ ನಡೆಸಿಕೊಂಡು, 'ಅಮ್ಮ'ಎಂದು ಕರೆದು ಅವರನ್ನು ಗೌರವಿಸಿ ಸ್ವೀಕರಿಸುತ್ತಾರೆ. ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರದಲ್ಲಿ ಅನಂತ ಎಂದು ಹೇಳಿಕೊಂಡು ಬಂದಂತಹ ಅನ್ವರ್‌ನನ್ನು ಮನೆಯ ಮಗನ ಹಾಗೆ ಇರಲಿ ಎಂದು ಅವರ ಪರಿವಾರಕ್ಕೆ ಸೇರಿಸಿಕೊಳ್ಳುತ್ತಾರೆ. ಅನ್ವರ್ ಕೂಡ, ನಾಟಕದಲ್ಲಿ ಬರುವ ಏಕೈಕ ಮುಸ್ಲಿಂ ಪಾತ್ರ. ಈ ಎರಡೂ ನಾಟಕಗಳಲ್ಲಿ ಹಿಂದೂ-ಮುಸ್ಲಿಂ ಭಾವೈಕ್ಯತೆ ಕಂಡುಬರುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಜತೆಗಿರುವನು ಚಂದಿರ ನಾಟಕದಲ್ಲಿ ಕಂಡುಬರುವ ಏಕೈಕ ಹಿಂದೂಪಾತ್ರ ಪಂಡಿತರ ಮಗ, ತೆರೆಯ ಮೇಲೆ ಎಲ್ಲಾ ಕಂಡುಬರದ ಪಾತ್ರ ಬಡೇಮಿಯಾನ ಮಗಳು 'ಸೈರಾ' ಪಂಡಿತರ ಮಗನನ್ನು ಮದುವೆ ಮಾಡಿಕೊಂಡ ಕಾರಣ ಅವಳನ್ನು ತಿರಸ್ಕರಿಸುತ್ತಾರೆ.

ಒಟ್ಟಾರೆಯಾಗಿ ಮೂರು ನಾಟಕದ ವಸ್ತು ಒಂದೇ ಎರಡೂ ಕಂಡುಬಂದರೂ ಆದರಲ್ಲಿನ ವೈಷಮ್ಯಗಳೂ ಬೆಳಕಿಗೆ ಬರುತ್ತದೆ. 'ರಾವಿನದಿಯ ದಂಡೆಯಲ್ಲಿ' ನಾಟಕದಲ್ಲಿ ಕೋಮುಸೌಹಾರ್ದತೆಯನ್ನು ಪ್ರತಿಪಾದಿಸಿದರೆ, ಜತೆಗಿರುವನು ಚಂದಿರದಲ್ಲಿ, ಪರಂಪರೆಗೆ ಅಗ್ರಸ್ಥಾನ ಕೊಟ್ಟಿದ್ದಾರೆ. ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರದಲ್ಲಿ, ಧರ್ಮ, ಜಾತಿಗಿಂತ ಮನುಷ್ಯ ಧರ್ಮ ದೊಡ್ಡದು ಎಂಬ ಪ್ರತಿಪಾದವನ್ನು ಮುಂದಿಟ್ಟಿದ್ದಾರೆ.

### (ಆ) ಪಾತ್ರ ಸಂಬಂಧ:

'ರಾವಿನದಿಯ ದಂಡೆಯಲ್ಲಿ', ಜತೆಗಿರುವನು ಚಂದಿರ, ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' - ಮೂರುನಾಟಕಗಳಲ್ಲಿ ವೈವಿಧ್ಯಮಯ ಪಾತ್ರಗಳು ಕಂಡುಬರುತ್ತವೆ. ಬಹುಶಃ ವಸ್ತುವಿಗೆ ಅನುಗುಣವಾಗಿ, ಭಾವನಾತ್ಮಕ ಪಾತ್ರಗಳು, ವಿಚಾರವಂತ ಪಾತ್ರಗಳು, ಮುಗ್ಧತೆಯಿಂದ ಕೂಡಿದಂತಹ ಪಾತ್ರಗಳು ಕಂಡುಬರುತ್ತೆ.

'ರಾವಿನದಿಯ ದಂಡೆಯಲ್ಲಿ' ಕವಿನಾಸಿರ್ ಮತ್ತು ಮೌಲ್ವಿಗಳು ವಿಚಾರವಂತಹ ಪಾತ್ರಗಳಾಗಿ ಕಂಡುಬರುತ್ತಾರೆ. ಜತೆಗಿರುವನು ಚಂದಿರದಲ್ಲಿ ಶಕೂರ್‌ಮಸ್ತರ್ ಮತ್ತು ಶಬ್ನಂ ವಿಚಾರವಂತ ಪಾತ್ರಗಳು ಮತ್ತು ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರದಲ್ಲಿ ಅನಂತ ಮತ್ತು ಶ್ಯಾಮಭಟ್ಟರು ವಿಚಾರವಂತ ಪಾತ್ರಗಳು.

'ರಾವಿನದಿಯ ದಂಡೆಯಲ್ಲಿ'ನ ಸಿಕಂದರ್ ಮಿರ್ಜಾ ಆರಂಭದಲ್ಲಿ ಕ್ರೌರ್ಯದಿಂದ ತುಂಬಿದ ಮತ್ತು ತನ್ನ ಪರಿವಾರವನ್ನು ಕಾಪಾಡಬೇಕೆಂಬ ಸ್ವಾರ್ಥದಿಂದ ಏನು ಬೇಕಾದರೂ ಮಾಡುವ ಸ್ಥಿತಿಯಲ್ಲಿರುತ್ತಾನೆ. ಅನಂತರದಲ್ಲಿ ರತನ್ ತಾಯಿಯು ತೋರಿಸಿದ ಮಮತೆ, ಪ್ರೀತಿಯಿಂದ ವಾತ್ಸಲ್ಯದ ಮಗನಾಗಿ ಪರಿವರ್ತನೆಗೊಂಡು ಜಾತಿ,

ಧರ್ಮ ಎಲ್ಲವನ್ನೂ ಮೀರಿ, ರತನ್ ತಾಯಿಯ ಶವವನ್ನು ಹಿಂದೂ ಧರ್ಮದಂತೆ ಸಂಸ್ಕಾರ ಮಾಡುವ ಮುಖಾಂತರ ಮಗನ ಕರ್ತವ್ಯವನ್ನು ನಿರ್ವಹಿಸಿ ಪ್ರಬುದ್ಧ ವ್ಯಕ್ತಿಯಾಗಿ ಕಂಡುಬರುತ್ತಾನೆ. ಹಾಗೆಯೇ 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ದಲ್ಲಿನ ಶ್ಯಾಮಭಟ್, ನಿವೃತ್ತ ನ್ಯಾಯಾಧೀಶರಾಗಿದ್ದು, ಅವರ ಪ್ರತಿಯೊಂದು ಮಾತಿನಲ್ಲೂ ನ್ಯಾಯವು ಮತ್ತು ವಿಚಾರವಂತಿಕೆ, ದೂರದೃಷ್ಟಿ, ಆದರ್ಶವಾದಿತನ ಎಲ್ಲವೂ ಎದ್ದು ಕಾಣುತ್ತೆ. ಸಮಾಜಲ್ಲಿ ನಡೆಯುತ್ತಿದ್ದಂತಹ ಅಸಮಾನತೆ, ಹಿಂಸೆ ಎಲ್ಲವೂ ಖಂಡಿಸಿ ಮುಂದೊಂದು ದಿನ ಪ್ರಜ್ಞಾವಂತ ನಾಗರಿಕ ಸಮಾಜ ಹುಟ್ಟುತ್ತದೆ ಎಂಬ ಆದರ್ಶವನ್ನು ಹೊಂದಿದಂತಹ ಪಾತ್ರ. ಅನಂತ ಎಂದು ಹೇಳಿಕೊಂಡು ಇದ್ದಂತಹ ಅನ್ವರ್‌ನನ್ನು ಕೊನೆಗೂ ಮನೆ ಮಗನಾಗಿ ಉಳಿಯಬೇಕೆಂದು ಅಂತಿಮ ತೀರ್ಮನ್ನು ನೀಡಿದ ಮಹಾನ್ ವ್ಯಕ್ತಿ. ಜಾತಿ, ಧರ್ಮಕ್ಕಿಂದ ಸಂಬಂಧ ಮೇಲಿನ ನಂಬಿಕೆ ಇರಬೇಕೆಂಬ ನಿಲುವನ್ನು ಪ್ರತಿಪಾದಿಸಿದ್ದಾರೆ. ಈ ಎರಡೂ ಪಾತ್ರಗಳಲ್ಲಿ ಸಾಮ್ಯತೆ ಕಂಡುಬರುತ್ತದೆ. ಮತ್ತು ಬಡೇಮಿಯಾ ಪಾತ್ರವು ಇದಕ್ಕೆ ವಿರುದ್ಧವಾಗಿ ಬರುತ್ತದೆ.

ಇದಕ್ಕೆ ಸ್ವಲ್ಪಮಟ್ಟಕ್ಕೆ ವಿರುದ್ಧವಾದ ಪಾತ್ರ ಜತೆಗಿರುವನು ಚಂದಿರದಲ್ಲಿನ ಬಡೇಮಿಯಾ ಪಾತ್ರದಲ್ಲಿ ಕಾಣಬಹುದು. ಅನಕ್ಷರಸ್ತ, ಮುಗ್ಧ ವ್ಯಕ್ತಿಯಾದ ಬಡೇಮಿಯಾ ಜೀವನದಲ್ಲಿ ಬಂದಂತಹ 'ಶಕೂರ್'ನಿಂದ ತನ್ನ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಾನೆ. ಇಸ್ಲಾಂ ಸಮಾಜದಲ್ಲಿ ಹಿಂದೆ ಎಂದೂ ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡುವುದು ಕನಸಾಗಿದ್ದ ಕಾಲದಲ್ಲಿ ಬಡೇಮಿಯಾ ಅದನ್ನು ಮೀರಿ ಮಕ್ಕಳಿಗೆ ಶಿಕ್ಷಣ ಕೊಡಿಸುತ್ತಾನೆ. ತನ್ನ ಮಕ್ಕಳು ಇಷ್ಟಪಟ್ಟಂತಹ ಹುಡುಗರೊಂದಿಗೆ ಮದುವೆಯಾಗಲೂ ಒಪ್ಪುವ ಬಡೇಮಿಯಾ, ತನ್ನ ಕೊನೆ ಮಗಳು 'ಸೈರಾ' ಹಿಂದೂ ಹುಡುಗನನ್ನು ಮದುವೆ ಮಾಡಿಕೊಂಡಳೆಂಬ ಕಾರಣಕ್ಕಾಗಿ ಅವಳನ್ನು ತಿರಸ್ಕರಿಸಿ ತಮ್ಮ ಪಾಲಿಗೆ 'ಸತ್ತು ಹೋದಳು' ಎಂಬ ಕಠೋರ ನಿರ್ಧಾರಕ್ಕೆ ಬರುತ್ತಾರೆ. 'ಪರಂಪರೆ'ಯೇ ಇವರ ಬದುಕನ್ನು ನಿಯಂತ್ರಿಸುತ್ತಿರುವುದು ಈ ಪಾತ್ರದಲ್ಲಿ ಕಾಣಬಹುದು.

ಮುನೀರ್ ಜಾನ್, ಬಡೇಮಿಯಾನ ಪತ್ನಿ. ಬಡೇಮಿಯಾರ ಪತ್ರಿಯೊಂದು ಕೆಲಸ, ಕಾರ್ಯದಲ್ಲೂ ಸಹಭಾಗಿಯಾಗಿ ಆದರ್ಶ ಪತ್ನಿಯಂತೆ ಇರುತ್ತಾಳೆ. ತನ್ನ ಮೂರು ಮಕ್ಕಳೇ ಅವಳಿಗೆ ಪ್ರಪಂಚ. ಅವರ ಮದುವೆ ಕನಸನ್ನು ಕಾಣುತ್ತಾ ಇರುತ್ತಾಳೆ. ಮುಗ್ಧ ಹೆಂಗಸಾದ ಮುನೀರ್ ಜಾನ್ ಬಡೇಮಿಯಾ ಹೇಳಿದ ಸುಳ್ಳನ್ನೇ ನಿಜವೆಂದು ನಂಬಿ ಮಗಳು ಆರ್ಷಿಯಾಳನ್ನು ಶಫಿಗೆ ಕೊಡಲು ನಿರ್ಧರಿಸುತ್ತಾಳೆ.

ಶಬ್ನಂ, ಶಕೂರ್‌ನನ್ನು ಇಷ್ಟಪಟ್ಟಾಗ, ಮುನೀರ್ ಜಾನ್ ಇಷ್ಟ ಇಲ್ಲದಿದ್ದರೂ ಒಪ್ಪುತ್ತಾಳೆ. 'ಸೈರಾ' ಹಿಂದೂ ಹುಡುಗನನ್ನು ಮದುವೆಯಾದಾಗಲೂ ಮಗಳ ಮಮತೆಯಿಂದ ತತ್ತರಿಸುತ್ತಾಳೆ. ಆದರ್ಶ ಪತ್ನಿ, ಮಮತೆಯಿಂದ ತುಂಬಿದ ಮಾತೃಹೃದಯಿಯಾಗಿ ಕಂಡುಬರುತ್ತಾಳೆ. ಊರಿನಲ್ಲಿ ದಂಗೆ ಆರಂಭವಾದಾಗ ಮನೆ ಬಿಡುವ ಸಂದರ್ಭದ ಕೊನೆಯಲ್ಲಿ ಮನೆಯಲ್ಲಿನ ಕಸ ಹೊಡೆಯುತ್ತಾ ನಿಲ್ಲುತ್ತಾಳೆ. ತಾವೇ ಕಟ್ಟಿಕೊಂಡಂತಹ ಪರಂಪರೆಯನ್ನು ಕೆಡವಿ ಬದುಕನ್ನು ಸಾಗಿಸಲು ಮುಂದಾಗುತ್ತಾಳೆ. ಬದುಕು ಎಲ್ಲದಕ್ಕಿಂತ ಮುಖ್ಯ ಎಂಬ ನಿಲುವನ್ನು ಈ ಪಾತ್ರದ ಮುಖಾಂತರ ತಂದಿದ್ದಾರೆ.

'ಜತೆಗಿರುವನು ಚಂದಿರ'ದಲ್ಲಿ – ಹಮೀದಾ ಬೇಗಂ, ಸಿಕಂದರ್ ಮಿರ್ಜಾಗೆ ಅನುರೂಪವಾದ ಹೆಂಡತಿ. ಇಬ್ಬರ ಮನಃಸ್ಥಿತಿಯೂ ಒಂದೇ ರೀತಿ ನಡೆಯುತ್ತಿರುತ್ತದೆ. ಮಿರ್ಜಾ ಸಾಹೇಬರು 'ರತನ್ ತಾಯಿ' ಯನ್ನು ಕೊಲ್ಲಬೇಕೆಂಬ ಕ್ರೌರ್ಯಕ್ಕೆ ಕೈಹಾಕಿದಾಗ ಅದನ್ನು ತಡೆದು ಅವರನ್ನು ಸತ್‌ಮಾರ್ಗಕ್ಕೆ ತರುವ ಪ್ರಯತ್ನ ಹಮೀದಾಬೇಗಂದಾಗಿರುತ್ತದೆ. ಸ್ವತಃ ಎರಡು ಮಕ್ಕಳ ತಾಯಿಯಾದರೂ, ರತನ್ ತಾಯಿಗೆ ಇವಳು ಮಗಳಾಗುತ್ತಾಳೆ. ತನ್ನ ಪರಿವಾರದೊಡಗೂಡಿ ರತನ್ ತಾಯಿಯೊಡನೆ 'ದೀಪಾವಳಿ' ಹಬ್ಬವನ್ನು ಆಚರಿಸುತ್ತಾಳೆ. ಸೌಹಾರ್ದತೆಯನ್ನು ಬಿಂಬಿಸುವಂತಹ ಪಾತ್ರ ಇದಾಗಿದೆ. ಈ ಎರಡೂ ಪಾತ್ರಗಳಲ್ಲೂ ಸಾಮ್ಯತೆ ಕಂಡುಬರುತ್ತದೆ. ಆದರೆ, ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರಲ್ಲಿನ ಸೀತಮ್ಮ ಇದಕ್ಕೆ ಸ್ವಲ್ಪಮಟ್ಟಿಗೆ ಭಿನ್ನವಾದ ಪಾತ್ರವಾಗಿರುತ್ತದೆ.

'ಸೀತಮ್ಮ' ತನ್ನ ಮಗನಿಂದ ದೂರವಾಗಿ ಮಗನಿಗಾಗಿ ಹಂಬಲಿಸುತ್ತಿರುತ್ತಾಳೆ. ತುಂಬಾ ಭಾವುಕತೆ ತುಂಬಿದಂತಹ ಪಾತ್ರ ಸೀತಮ್ಮನದು. ಊರಲ್ಲಿ ನಡೆಯುತ್ತಿದ್ದಂತಹ ದಂಗೆ, ಹಿಂಸೆ, ಬಗ್ಗೆ ಮಾತಾಡಿದರೂ ಆ ಮಾತನ್ನು ಅಲ್ಲಿಗೆ ನಿಲ್ಲಿಸುತ್ತಿದ್ದಳು. ಅನ್ವರೇ ಅನಂತ ಎಂದಾಗ ಮಗ ಎಂದು ಅವನನ್ನು ಮುದ್ದಿಸಿದ ಸೀತಮ್ಮ, ಅವನು ಅನಂತನಲ್ಲ ಎಂದು ತಿಳಿದಾಗ ಮಗ ಎಂದು ಸ್ವೀಕರಿಸಲು ಹಿಂಜರಿಯುತ್ತಾಳೆ. ಈ ತಾಯಿಯ ಮಮತೆಯಲ್ಲಿ ಬೇಧವನ್ನು ಕಾಣುತ್ತೇವೆ.

'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ದಲ್ಲಿ ಬರುವ 'ಮಹಾಬಲನ ಪಾತ್ರ' ಆರ್.ಎಸ್.ಎಸ್. ಪ್ರತಿಪಾದಕನಂತೆ ಕಂಡುಬರುತ್ತದೆ. ಹಿಂಸೆಯಿಂದಲೇ ದೇಶದಲ್ಲಿ ಸಮಾನತೆ ತರಬಹುದು ಎಂಬ ನಿಲುವನ್ನು ಹೊಂದಿರುವವನು. ಅಲ್ಪಸಂಖ್ಯಾತರಾದ ಮುಸ್ಲಿಂರೇ ಹಿಂದೂಗಳ ಮೇಲೆ ದೌರ್ಜನ್ಯ ಮಾಡುತ್ತಿರುವರೆಂದು, ಅದಕ್ಕಾಗಿ ದೇಶದಲ್ಲಿ ನಡೆದ ನಾನಾ ಉದಾಹರಣೆಗಳನ್ನು ಕೊಡುತ್ತಿರುತ್ತಾನೆ. ಎಲ್ಲರ ಮಾತಿನಲ್ಲೂ, ಎಲ್ಲ ವ್ಯಕ್ತಿಗಳ ಮೇಲೂ ಅನುಮಾನ ಪಡುವಂತಹ ಮಹಾಬಲ, ಹಿಂದೂ ಧರ್ಮದಲ್ಲೇ ಇರುವ ಸಂಘರ್ಷಗಳಿಗೆ ಉದಾಹರಣೆಯಾಗಿದ್ದಾನೆ. ಆಧುನಿಕತೆಯತ್ತ ಚಲಿಸುತ್ತಿರುವ ಈ ವಿಜ್ಞಾನಯುಗದಲ್ಲಿ ಕೋಮುವಾದವನ್ನು ಹೇಳುವ ಈ ಮಹಾಬಲನ ಪಾತ್ರವು ವಿಡಂಬನೆಯ ರೀತಿಯಲ್ಲಿದೆ.

'ಜತೆಗಿರುವನು ಚಂದಿರ'ದಲ್ಲಿ ಬರುವ ಶಕೂರ್ ಮಾಸ್ತರ್, ವಿದ್ಯಾವಂತ ಮತ್ತು ವಿಚಾರವಂತ ಪಾತ್ರ, ಮಹಾಬಲನು ಪ್ರತಿಪಾದಿಸಿದ ಹಿಂಸೆಯ ಪ್ರತಿಪಾದನೆಗೆ ವಿರುದ್ಧವಾದ ಅಂದರೆ ಅಹಿಂಸೆ ಪ್ರತಿಪಾದನೆ ಮಾಡಿದವನು ಶಕೂರ್‌ಮಾಸ್ತರ್. ಅನಕ್ಷರತೆ, ಅಜ್ಞಾನವಿದ್ದ ಜಾಗದಲ್ಲಿ ಅಕ್ಷರ ಮತ್ತು ಜ್ಞಾನದ ಬೆಳಕನ್ನು ಚೆಲ್ಲಿದವನು. ಮತ್ತು ದೇಶದ ರಕ್ಷಣೆ ಮಾಡುವುದು ತನ್ನ ಕರ್ತವ್ಯವೆಂದು ತಿಳಿದುಕೊಂಡಿದ್ದವನು. ಸ್ವಾರ್ಥತೆಯಿಂದ ಆಗುತ್ತಿರುವ ವಿಭಜನೆಯನ್ನು ವಿರೋಧಿಸಿದವನು ಒಟ್ಟಾರೆಯಾಗಿ ಜಾತಿ ಧರ್ಮದಿಂದ ಹೊರಬಂದು ನಿಜವಾದ ನಾಗರಿಕನ ಕರ್ತವ್ಯವನ್ನು ಮಾಡಿ ದೇಶದ ಸತ್‌ಪ್ರಜೆಯಂತೆ ಕಂಡುಬರುತ್ತಾನೆ.

'ನಾಸಿರ್' ಕವಿ. ರಾವಿನದಿಯ ದಂಡೆಯಲ್ಲಿ ಬರುವಂತಹ ಪರಿಣಾಮಕಾರಿ ಪಾತ್ರ, ಒಬ್ಬ ಸಮಾಜಸುಧಾರಕನ ಪಾತ್ರವನ್ನು ನಿರ್ವಹಿಸುವಂತಹವರು ನಾಸಿರ್ ಮತ್ತು ಸರ್ವಧರ್ಮ ಸಹಿಷ್ಣುವಂತೆ ಕಂಡುಬರುವನು. ಶಕೂರ್

ಮಾಸ್ತರಿನ ಪಾತ್ರದಂತೆ ಹೋಲುವರು. ಮಹಾಬಲನ ಪಾತ್ರದ ವಿರುದ್ಧ ಪಾತ್ರ. ಪ್ರಪಂಚದ ಸುಂದರತೆ ಮತ್ತು ಕ್ರೌರ್ಯತೆಯನ್ನು ತಮ್ಮ ಗಝಲ್ ಮುಖಾಂತರ ಕಟ್ಟಿಕೊಡುತ್ತಾರೆ. ಊರು ಬಿಟ್ಟು ಹೊರಡಲು ನಿಂತ ರತನ್ ತಾಯಿಯನ್ನು, ಅಕ್ಕರೆಯಿಂದ ಸಂತೈಯಿಸಿ ಪಾಕಿಸ್ತಾನದಲ್ಲೇ ಹಿಂದೂ ಸ್ತ್ರೀಯನ್ನು ಉಳಿಸಿಕೊಳ್ಳುತ್ತಾರೆ. ಮಹಾಬಲ ಅನ್ವರ್‌ನನ್ನು ಮನೆಯಿಂದ ಓಡಿಸುವ ಪ್ರಯತ್ನ ಮಾಡಿದರೆ, ಇಲ್ಲಿ ನಾಸಿರ್ ರತನ್ ತಾಯಿಯನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಹಿಂದೂ ಧರ್ಮದ ಬಗ್ಗೆ ನಾಸಿರ್ ಕವಿಗಿರುವ ನಮ್ರತೆ ಭಾವನೆ ಕಂಡುಬಂದರೆ, ಮಹಾಬಲನಿಗೆ ಇಸ್ಲಾಂಧರ್ಮದ ಬಗ್ಗೆ ತಿರಸ್ಕಾರವನ್ನು ಕಾಣುತ್ತೇವೆ. ಮತ್ತು ಹಿಂದೂ-ಮುಸ್ಲಿಂ ಧರ್ಮಕ್ಕಾಗಿ ಜನರು ಹಿಂಸೆಯನ್ನು ಮಾಡುವುದನ್ನು ನಾಸಿರ್ ತಿರಸ್ಕರಿಸುತ್ತಾರೆ.

'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ದಲ್ಲಿ ಬರುವ ಅನ್ವರ್ ನಾಟಕಕಾರರು ಸೃಷ್ಟಿಸಿದ ಕ್ರಾಂತಿಕಾರಕ ಪಾತ್ರ. ಪ್ರೀತಿಸಿದ ಹುಡುಗಿ, ಪರಿವಾರವರನ್ನು ಕಳೆದುಕೊಂಡು ಅನಾಥನಾದವನಿಗೆ ಆಶ್ರಯಸಿಕ್ಕ ಮನೆ ಶ್ಯಾಮಭಟ್ಟರ ಮನೆ. ಅನಂತನ / ಭಿಕ್ಷುಕನ ಸಲಹೆಯ ಮೇರೆಗೆ ತಾನೇ ಅನಂತ ಎಂದು ಹೇಳಿಕೊಳ್ಳುತ್ತಾನೆ. ಕಾರಣ ತನ್ನ ಬದುಕನ್ನು ಸಾಗಿಸಲು, ಆದರೆ ಇಸ್ಲಾಂಧರ್ಮದ ನಿಷ್ಠನಾದ ಅನ್ವರ್ ಹಿಂದೂ ಮನೆಯಲ್ಲಿ ಹೊಂದಿಕೊಳ್ಳಲು ಕಷ್ಟಪಡುತ್ತಾನೆ. ಮತ್ತು ಹಿಂದೂ-ಮುಸ್ಲಿಂ ಸೌಹಾರ್ದತೆಯನ್ನು ಒಪ್ಪಿದರೂ, ಹಿಂದೂ ಜನರ ಮಧ್ಯೆ ಇರಲು ಸ್ವತಃ ಅನ್ವರೇ ಒಪ್ಪುವುದಿಲ್ಲ. ಶ್ಯಾಮಭಟ್ಟರ ಮನೆಯವರೆಲ್ಲರೂ ಧರ್ಮದ ಗೋಡೆಯನ್ನು ಉರುಳಿಸಿದರೂ, ಅನ್ವರ್‌ನು ಧರ್ಮದ ಗೋಡೆಯನ್ನು ಉರುಳಿಸುವ ಪ್ರಯತ್ನವನ್ನು ಮಾಡಲಿಲ್ಲ. ಅನಿವಾರ್ಯವಾಗಿ ಹಿಂದೂಗಳ ಮನೆಯಲ್ಲೇ ಉಳಿಯ ಬೇಕಾದ ಪರಿಸ್ಥಿತಿ ಬರುತ್ತದೆ. ಅನ್ವರ್ ಪಾತ್ರ ಇಲ್ಲಿ ಸೋಲುತ್ತದೆ.

ರಾವಿನದಿಯ ದಂಡೆಯಲ್ಲಿ 'ರತನ್ ತಾಯಿ' ಪಾಕಿಸ್ತಾನದಲ್ಲಿ ಉಳಿದುಕೊಂಡ ಏಕೈಕ ಹಿಂದೂ ಹೆಂಗಸು. ಮಗ, ಸೊಸೆ, ಮೊಮ್ಮೊಕ್ಕಳನ್ನು ಕಳೆದುಕೊಂಡು ಒಂಟಿಯಾಗಿದ್ದಾಗ, ಬಡೇಮಿಯಾ ಕುಟುಂಬವನ್ನು ತನ್ನ ಕುಟುಂಬವೆಂದು ಪ್ರೀತಿಸುತ್ತಾಳೆ. ನಂತರದಲ್ಲಿ ಎಲ್ಲರ ಪ್ರೀತಿಯ 'ಅಮ್ಮ'ನಾಗುತ್ತಾಳೆ. ಪಾಕಿಸ್ತಾನದಲ್ಲಿ ಇಸ್ಲಾಂ ಧರ್ಮದೊಂದಿಗೆ ದೀಪಾವಳಿ ಆಚರಿಸುತ್ತಾಳೆ. ಹಿಂದೂ-ಮುಸ್ಲಿಂ ಧರ್ಮದ ಪ್ರತೀಕವೆಂಬಂತೆ ಈ ಪಾತ್ರ ಬರುತ್ತದೆ. ಹಿಂದೂ-ಮುಸ್ಲಿಂ ಧರ್ಮ ಗೋಡೆಯನ್ನು ರತನ್ ತಾಯಿ ಮತ್ತು ಮಿರ್ಜಾ ಕುಟುಂಬದ ಜನರೆಲ್ಲರೂ ಸೇರಿ ಒಡೆದು ಸೌಹಾರ್ದತೆಗೆ ಪ್ರತೀಕವಾಗಿರುವಂತೆ ಕಂಡುಬರುತ್ತಾರೆ. ಇಲ್ಲಿ ಇಸ್ಲಾಂ ಜನರೆಲ್ಲರೂ ಹಿಂದೂ ಧರ್ಮವನ್ನು ಒಪ್ಪುತ್ತಾರೆ. ಆಧರಿಸುತ್ತಾರೆ, ಆದರೆ ಅನ್ವರ್ ಮಾತ್ರ ಹಿಂದೂ ಧರ್ಮವನ್ನು ಒಪ್ಪಿಕೊಳ್ಳಲು ನಿರಾಕರಿಸುತ್ತಾನೆ.

ರತನ್ ತಾಯಿಯು ಮಾಡಿದಂತಹ ಕೆಲಸವನ್ನೇ ಜತೆಗಿರುವನು ಚಂದಿರ ನಾಟಕದಲ್ಲಿ 'ಸೈರಾ' ಮಾಡುತ್ತಾಳೆ. ಅನಕ್ಷರಸ್ಥ ಕುಟುಂಬದಲ್ಲಿ ಪುಸ್ತಕ ಓದುತ್ತಿದ್ದ ಏಕೈಕ ಹುಡುಗಿ. ಇಸ್ಲಾಂ ಧರ್ಮದಲ್ಲಿ ಹೆಣ್ಣುಮಕ್ಕಳಿಗೆ ಅಕ್ಷರಜ್ಞಾನವಿರುವುದೇ ಅತೀ ದೊಡ್ಡ ವಿಷಯವಾಗಿತ್ತು ಮತ್ತು ಹಿಂದೂ ಹುಡುಗನಾದ ಪಂಡಿತರ ಮಗನನ್ನು ಮದುವೆಯಾಗಿ ಅಪ್ಪಟ್ಟ ಹಿಂದೂ ಹೆಣ್ಣು ಮಗಳಂತೆ ಕಾಣುತ್ತಾಳೆ. 'ಮಂಗಳಸೂತ್ರ' ವನ್ನು ಧರಿಸಿ. ಇದರಿಂದ ಮನೆಯರೊಂದಿಗೆ ಸಂಬಂಧವನ್ನು ಕಡೆದುಕೊಂಡರೂ, ಹಿಂದೂ-ಮುಸ್ಲಿಂರ ನಡುವಿನ ಅಂತರ ಕಡಿಮೆಮಾಡಲು ಇವಳು

ನಾಂದಿಯಾಗಿದ್ದಾಳೆ ಎನ್ನಬಹುದು. ಮಗಳಾಗಿ ಮನೆಯವರ ಮುಂದೆ ಸೋತರೂ, ತನ್ನ ಪ್ರೀತಿಯನ್ನು ಆಯ್ಕೆ ಮಾಡಿಕೊಂಡು ಸಮಾಜಕ್ಕೆ ಸಂದೇಶ ಸಾರುವಲ್ಲಿ ಯಶಸ್ವಿಯಾದಂತಹ ಪಾತ್ರ.

ರಾವಿನದಿಯ ದಂಡೆಯಲ್ಲಿ ನಾಟಕದಲ್ಲಿ ಪ್ರಮುಖಪಾತ್ರ ಮೌಲ್ವಿಗಳದ್ದು. ನಿಜವಾದ ಧರ್ಮ ಸುಧಾರಕ. ಅದರೆ, ಇದೇ ಧರ್ಮಸುಧಾರಣೆಯಿಂದಲೇ ಅವರ ಜೀವನ ಅಂತ್ಯವಾಗುತ್ತದೆ. 'ರತನ್ ತಾಯಿ'ಯ ವಿರುದ್ಧ ಪೈಲ್ವಾನ್ ಪಿತೂರಿಗಳನ್ನೆಲ್ಲಾ ಖಂಡಿಸುತ್ತಿದ್ದರು. ನಿಜವಾದ ಇಸ್ಲಾಂ ಧರ್ಮಿಯ ಕರ್ತವ್ಯ ಮತ್ತು ಅವರು ವಹಿಸಬೇಕಾದಂತಹ ಪಾತ್ರವನ್ನು ಸ್ಪಷ್ಟವಾಗಿ ಹೇಳುತ್ತಿದ್ದರು. ರತನ್ ತಾಯಿಯ ಶವ ಸಂಸ್ಕಾರವನ್ನು ಹಿಂದೂ ಸಂಪ್ರದಾಯದಂತೆ ನಡೆಯಬೇಕೆಂದು ಹೇಳಿದ ನಿಜವಾದ ಅರ್ಥದಲ್ಲಿ ಮೌಲ್ವಿ ಇವರಾಗಿದ್ದಾರೆ. ಎಲ್ಲಾ ಧರ್ಮಕ್ಕೂ ಅದರದ್ದೇ ಆದಂತಹ ಶ್ರೇಷ್ಠತೆ ಇದೆ. ಅದನ್ನು ತೆಗೆಳುವ ಹಕ್ಕು ನಮಗಿಲ್ಲ ಎಂಬ ನೀತಿಯನ್ನು ಸಾರಿದರು. ಇಲ್ಲಿ ಧರ್ಮ ಸಮನ್ವಯವನ್ನು ಸಾರಿದರೆ, ಜತೆಗಿರುವನು ಚಂದಿರ ನಾಟಕದಲ್ಲಿ ಶಕೂರ್ ಮಾಸ್ತರ್, ಕತ್ತಲಲ್ಲಿ ಇದ್ದ ಜನರಿಗೆ ಜ್ಞಾನವನ್ನು ಕೊಟ್ಟು ಬೆಳಕಿನೆಡೆಗೆ ಸಾಗಲು ಪ್ರಯತ್ನ ಮಾಡಿದನು. ಧರ್ಮಕ್ಕಿಂತ ದೇಶ ಮುಖ್ಯ ಎಂಬ ನಿಲುವನ್ನು ಸಾರಿದ್ದಾನೆ. ಇದಕ್ಕೆ ವಿರುದ್ಧ ಪಾತ್ರಗಳು ಮಹಾಬಲ ಮತ್ತು ರಾವಿನದಿಯ ದಂಡೆಯಲ್ಲಿ ಬರುವಂತ ಪೈಲ್ವಾನ್. ಮಹಾಬಲ ಹಿಂದೂ ಧರ್ಮದ ರಕ್ಷಣೆ ಮಾಡಬೇಕೆಂಬ ನಿಟ್ಟಿನಲ್ಲಿ ಇಸ್ಲಾಂ ಧರ್ಮಿಯರ ವಿರುದ್ಧ ಸಮರ ಸಾರಿದರೆ, ಪೈಲ್ವಾನ್, ಇಸ್ಲಾಂ ಧರ್ಮದ ಉಳಿವಿಗಾಗಿ ಹಿಂದೂ ಧರ್ಮವನ್ನು ನಾಶಮಾಡುವ ಹಾದಿಯನ್ನು ಆರಿಸಿಕೊಂಡಿದ್ದನು. **'Idel mind is devil workshop'** ಎನ್ನುವ ಮಾತಿನಂತೆ ಪೈಲ್ವಾನ್ ಪ್ರವೃತ್ತಿ ಕಂಡುಬರುತ್ತದೆ. ಕೊನೆಗೆ ಹಿಂದೂ ಧರ್ಮದ ಪರವಾಗಿ ನಡೆದುಕೊಂಡ ಎಂದು ಮೌಲ್ವಿಯನ್ನು ಕೊನೆಮಾಡಿದಂತಹ ಧರ್ಮಾಂದತೆಯನ್ನು ಉಳ್ಳವನು. ಮಹಾಬಲನು ಮತ್ತು ಅವನ ಸಂಗಡಿಗರು ಅನ್ವರ್ ಕುಟುಂಬದವರನ್ನು ಮತ್ತು ಅದನ್ನು ಪ್ರೀತಿಸಿದ ಹುಡುಗಿ ಎಲ್ಲರನ್ನೂ ಕೊಂದನು. ಹಿಂದೂ ಧರ್ಮ ಶ್ರೇಷ್ಠ ಎಂದು ಹೇಳುವ ಮಹಾಬಲ ಅದೇ ಧರ್ಮಕ್ಕೆ ಕಳಂಕ ತರುವ ಕೆಲಸವನ್ನು ಮಾಡಿದನು.

ಇಸ್ಲಾಂ ಹುಡುಗ ಹಿಂದೂ ಹುಡುಗನಾಗಿ ಪರಿವರ್ತಿತವಾಗುವುದು, ಹಿಂದೂ ಹೆಂಗಸು ಇಸ್ಲಾಂ ಜನರೊಂದಿಗೆ ಒಂದಾಗಿರುವುದು ಮತ್ತು ಹಿಂದೂ ಹುಡುಗನನ್ನು ಮದುವೆಯಾದ ಸೈರಾಳನ್ನು ತಿರಸ್ಕರಿದಂತಹ ಪರಿವಾರದವರು. ಹೀಗೆ ಅನೇಕ ಪಾತ್ರಗಳು ಬರುತ್ತದೆ. ಎಲ್ಲ ಪಾತ್ರಗಳು ತಮ್ಮದೇ ಆದಂತಹ ವೈಶಿಷ್ಟ್ಯದಿಂದ ನಾಟಕದಲ್ಲಿ ತಮ್ಮದೇ ಆದಂತಹ ಜಾಗವನ್ನು ಗಳಿಸಿಗೊಂಡಿದೆ. ಇನ್ನು ಪಾತ್ರಗಳು ಕೆಲವು ಸಮಾಜಕ್ಕೆ ಪ್ರಭಾವ ಬೀರುವಂತ ಪಾತ್ರಗಳಾಗಿವೆ.

### (ಇ) ನಾಟಕಗಳಲ್ಲಿನ ದೃಷ್ಟಿಕೋನ:

ಪ್ರತಿಯೊಬ್ಬ ನಾಟಕಕಾರರ ದೃಷ್ಟಿಕೋನವೂ ಭಿನ್ನವಾಗಿರುತ್ತದೆ. ಒಂದು ನಿರ್ದಿಷ್ಟ ವಸ್ತುವಿಗೆ ಸಂಬಂಧಿಸಿದಂತೆ ಏಕ ಮತ್ತು ಭಿನ್ನ ಅಭಿಪ್ರಾಯಗಳು ಲೇಖಕರಲ್ಲಿ ಮೂಡುವುದು ಸಹಜ. ಹುಟ್ಟಿ-ಬೆಳೆದು ಬಂದಂತಹ ಪರಿಸರ, ಪ್ರಭಾವಗಳು, ಜೀವನಾನುಭವ, ಕಾಲಘಟ್ಟ, ಇಂತಹ ಹಲವು ಅಂಶಗಳು ಮನೋಧರ್ಮ, ದೃಷ್ಟಿಧೋರಣೆಗಳಲ್ಲಿ

ಕಂಡುಬರುತ್ತದೆ. ಆಧುನಿಕ ಚಿಂತನೆ, ಇಲ್ಲವೇ ಸ್ವಾತಂತ್ರ್ಯದ ಸಂದರ್ಭ, ದೇಶ ವಿಭಜನೆಗೆ ಸಂಬಂಧಿಸಿದಂತೆ ನಡೆದ ಘಟನೆಗಳು ಇವೆಲ್ಲವೂ ನಾಟಕಕಾರರ ಮೇಲೆ ಪ್ರಭಾವವನ್ನು ಬೀರಿದೆ. ಈ ಹಿನ್ನಲೆಯಲ್ಲಿ 'ರಾವಿನದಿಯ ದಂಡೆಯಲ್ಲಿ', 'ಜತೆಗಿರುವನು ಚಂದಿರ', 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' 'ಈ ಮೂರು ನಾಟಕಕಾರರ ದೃಷ್ಟಿ – ಧೋರಣೆಗಳನ್ನು ಅರಿಯುವ ಅಗತ್ಯವಿದೆ. 'ರಾವಿನದಿಯ ದಂಡೆಯಲ್ಲಿ' ನಾಟಕವು ಅನುವಾದವಾದರೂ ಮೂಲದ ವಸ್ತುವನ್ನೇ ಹೇಳಿದ್ದಾರೆ. ಅದು ಕೋಮು ಸೌಹಾರ್ದತೆಯನ್ನೇ, ಜತೆಗಿರುವನು ಚಂದಿರವೂ 'ರಷ್ಯಾ' ದೇಶದ ಒಂದು ನಾಟಕದ ಅನುವಾದವಾದರೂ, ಭಾರತ ದೇಶ ಕಾಲಮಾನ ಮತ್ತು ಮನಸ್ಥಿತಿಗೆ ಸರಿ ಹೊಂದುವಂತೆ ಬದಲಾಯಿಸಿ, ಪರಂಪರೆಯಲ್ಲೇ ಬದುಕಿದ್ದ ಜನರಲ್ಲಿ ಇರಬೇಕಾದ ಸೌಹಾರ್ದತೆಯನ್ನು ಹೇಳಲು ಹೊರಟ್ಟಿದ್ದಾರೆ. ಇನ್ನೂ ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ ನಾಟಕವು ಸ್ವತಂತ್ರನಾಟಕವಾಗಿದೆ. ಆಧುನಿಕ ವೈಜ್ಞಾನಿಕಯುಗಕ್ಕೆ ಕಾಲಿಟ್ಟಿದ್ದಾನೆ ಮನುಷ್ಯ. ಆದರೆ, ಭೂಮಿ ಮೇಲೆ ಮಾನವನಾಗಿ ಬಾಳುವ ಕಲೆಯನ್ನು ಮಾತ್ರ ಕಲಿಯಲೇ ಇಲ್ಲ. ಆದ್ದರಿಂದ ಸೃಷ್ಟಿಯಾದಂತಹದ್ದು ಹಿಂದೂ–ಮುಸ್ಲಿಂ ಎಂಬ ಕೋಮುವಾದ, ಇದನ್ನು ಸೃಷ್ಟಿಸಿ, ಹೆಮ್ಮರದಂತೆ ಬೆಳಯಲು ಸಹಾಯಮಾಡುಲು ಕೆಲವೇ ಕೆಲವು ಸ್ವಾರ್ಥರಾಜಕೀಯದವರೂ ಕಾರಣರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಜಾತಿ, ಧರ್ಮಕ್ಕಿಂತ ಮನುಷ್ಯತ್ವ ಧರ್ಮ ದೊಡ್ಡದು, ಈ ನಾಟಕದಲ್ಲಿ ಹೇಳಿದ್ದಾರೆ.

ಡಾ. ತಿಪ್ಪೇಸ್ವಾಮಿಯವರು ಆಧುನಿಕ ಲೇಖಕರು. ಹಿಂದಿ ಸಾಹಿತ್ಯದ ಪ್ರಭಾವ ಅವರಲ್ಲಿ ಬಹಳವಾಗಿ ಕಂಡುಬರುವುದರಿಂದ ಅವರು ಹಿಂದಿ ಪ್ರಭಾವಿ ನಾಟಕವನ್ನೇ ಕನ್ನಡಕ್ಕೆ ಅನುವಾದಿಸಿದ್ದಾರೆ. ಸ್ನೇಹಮಯಿ, ವಿನಯಶಾಲಿಯಾಗಿದ್ದ ತಿಪ್ಪೇಸ್ವಾಮಿಯವರು ತಮಗನಿಸಿದ ಅಂತಸ್ಥ ಭಾವನೆಗಳನ್ನು ಯಾವುದೇ ಅಂಜಿಮೆಯಿಲ್ಲದೆ ಮುಕ್ತ ರಕ್ತ ಸೂಕ್ತ ಮನಸ್ಸಿನಿಂದ ವ್ಯಕ್ತಪಡಿಸಬಲ್ಲರು. ನವ್ಯ ಪಂಥಕ್ಕೆ ಹೋಲುವ ಲೇಖಕರು ಜಯಂತ ಕಾಯ್ಕಿಣಿ, ನವ್ಯ ಪಂಥದಲ್ಲಿ ಬಳಸುವಂತಹ ತಂತ್ರಗಳು ಸ್ವಗತದಲ್ಲಿ ಮಾತಾಡಿಕೊಳ್ಳುವುದು, ಅಭಿವ್ಯಕ್ತಿ ಶೈಲಿಯಲ್ಲಿ ಒಂದು ನಿಗೂಢತೆಯನ್ನು ಸೃಷ್ಟಿಸುವುದು, ಸರಳ–ಸಹಜವಾಗಿ ಹೇಳದೆ ಬಹಳ ಪರಿಣಾಮಕಾರಿಯಂತೆ ಚಿತ್ರಿಸುವುದು ನವ್ಯ ಪಂಥದಲ್ಲಿ ಕಾಣುವಂತಹ ಲಕ್ಷಣವಾಗಿದೆ. ಕೆ. ವಿ. ಅಕ್ಷರರವರೂ ಕೂಡ ಆಧುನಿಕ ಚಿಂತಕರಾಗಿದ್ದು, ರಂಗಭೂಮಿ, ರಂಗಶಿಕ್ಷಣಕ್ಕಾಗಿ ದುಡಿದಂತಹವರು. ಭಾರತದ ರಂಗಭೂಮಿಯ ಬಗ್ಗೆ ಕುರಿತು ಅಭ್ಯಾಸ ಮಾಡಿದಂತಹ ಅನುಭವ ಇವರಿಗಿದೆ. ಇವರಲ್ಲೆರ ಆಶಯವಾಗಿ ಈ ನಾಟಕಗಳು ಮೂಡಿಬಂದಿದೆ. ನವ್ಯ ಪಂಥದ ಪ್ರತಿಪಾದನೆ ಮತ್ತು ಆಧುನಿಕ ಕಾಲ ಘಟ್ಟದಲ್ಲಿನ ಪ್ರಭಾವಗಳಲ್ಲೆವೂ ಈ ಮೂರು ನಾಟಕಗಳಲ್ಲಿ ಕಾಣಬಹುದಾಗಿದೆ.

ಒಂದು ನಾಟಕವು ಸಮಾಜಕ್ಕೆ ಪ್ರಭಾವ ಬೀರುವಂತಹದ್ದಾಗಬೇಕಾದರೆ, ಪಾತ್ರಗಳು ಎಷ್ಟು ಮುಖ್ಯವೋ ಅಷ್ಟೇಮುಖ್ಯ ನಾಟಕ ದೃಷ್ಟಿಯಾಗುತ್ತದೆ. 'ರಾವಿನದಿಯ ದಂಡೆಯಲ್ಲಿ' ನಾಟಕವು ಹೇಳುವುದು ಕೋಮು ಸೌಹಾರ್ದತೆಯನ್ನು. ಅದಕ್ಕೆ ಸರಿಹೊಂದುವಂತಹ ಕಾಲಘಟ್ಟವಾಗಿ ಸ್ವಾತಂತ್ರ್ಯದ ನಂತರದ ದೇಶದ ಸ್ಥಿತಿ. ಈ ನಾಟಕದ ದೃಷ್ಟಿಯು ಸ್ವೀಕಾರಾರ್ಹವಾಗಿದೆ ಎಂದು ಹೇಳಬೇಕು. ಇದಕ್ಕೆ ಸಿಕಂದರ್ ಮಿರ್ಜಾ ಮತ್ತು ರತನ್ ತಾಯಿಯ ಪಾತ್ರದಿಂದಲೇ ಸಾಬೀತು ಪಡಿಸಬಹುದಾಗಿದೆ. ಸಿಕಂದರ್ ಮಿರ್ಜಾ ಮತ್ತು ರತನ್ ತಾಯಿಯ

ಜೀವನದಲ್ಲಿ ಎದುರಾಗುವ ಪ್ರತಿಯೊಂದು ಸನ್ನಿವೇಶ, ವ್ಯಕ್ತಿಗಳು ಅವರನ್ನು ಜೀವನದೆಡೆಗೇ ಸೆಳೆಯುವಂತೆ ಮಾಡುತ್ತದೆ.

ನಾಟಕದಲ್ಲಿ ಹೇಳಲು ಹೊರಟಿರುವಂತಹದ್ದು ಕೋಮುಸೌಹಾರ್ದತೆಯೇ ಆದರೂ ಇದರಲ್ಲಿ ಬರುವ ಏಳು ಬೀಳುಗಳು ಹಲವಾರು, ಎದುರಿಸುವಂತಹ ಸಮಸ್ಯೆಗಳು ಅಸಂಖ್ಯಾ. ನಾಟಕಕಾರರು ಪಾತ್ರವನ್ನು ಸೃಷ್ಟಿಸುವುದು ಮಾತ್ರವಲ್ಲದೆ, ಪಾತ್ರಗಳು ನಿರ್ವಹಿಸುವ ಪಾತ್ರದ ಮೇಲೂ ದೃಷ್ಟಿಹರಿಸಿದ್ದಾರೆ.

ಸಿಂಕದರ್ ಮಿರ್ಜಾ ಮತ್ತು ರತನ್ ತಾಯಿಯ ಪಾತ್ರದಲ್ಲಿ, ಇವರು ನಡೆಯುವ ಹಾದಿಯಲ್ಲೇ ನಾಟಕಕಾರರು ಜೀವನ ದೃಷ್ಟಿಯನ್ನು ತೆರೆದಿಡುತ್ತಾರೆ.

**'ಲಾಹೋರ್ ಪಾಕಿಸ್ತಾನದ ಪಾಲಿಗೆ ಬಂದಿದೆ. ನಿಮಗೆ ಇಲ್ಲಿ ಯಾವ ಸ್ಥಾನವೂ ಇಲ್ಲ. ನಿಮ್ಮನ್ನು ಹಿಂದೂಸ್ತಾನಕ್ಕೆ ಕರೆದು ಕೊಂಡುಹೋಗ್ತಾರೆ'**[೧] ಎಂದು ಮಿರ್ಜಾ ಸಾಹೇಬರು ರತನ್ ತಾಯಿಗೆ ಹೇಳಿದ ಧೋರಣೆಯಾಗಿತ್ತು. ಇದು ಮಿರ್ಜಾ ಸಾಹೇಬರ ಆರಂಭಿಕ ದೃಷ್ಟಿ. ತದನಂತರದಲ್ಲಿ ಅವರ ಧೋರಣೆಯೂ ವಿನಯದಲ್ಲಿ ಬದಲಾಗಿ ದೃಷ್ಟಿಯಿಂದ, ಪೂರ್ಣದೃಷ್ಟಿ ಅಥವಾ ಪರಿಪೂರ್ಣ ದೃಷ್ಟಿಯ ಕಡೆಗೆ ಸಾಗುತ್ತದೆ.

**"ಆ ದರಿದ್ರದವಳನ್ನು ಮನೆ ಬಿಟ್ಟು ಓಡಿಸಬೇಕು"**

**"ಮುದುಕಿ ಸ್ವರ್ಗಕ್ಕೆ ಕಳಿಸೋಣ"**[೨]

ಎಂಬ ಕೆಟ್ಟ ಮನಸ್ಸಿನಭಾವನೆಯನ್ನು ತನ್ನದಾಗಿಸಿಕೊಂಡಿದ್ದು, ನಂತರದಲ್ಲಿ ಪರಿವರ್ತನೆಯನ್ನು ಹೊಂದುತ್ತಾನೆ. ರತನ್ ತಾಯಿ ದೀಪಾವಳಿ ಆಚರಿಸಲು ಅನುಮತಿ ಕೇಳಿದಾಗ ತಾಯಿಗೆ ಸಮ್ಮತಿಸುತ್ತಾನೆ. ಅಂತ್ಯದಲ್ಲಿ 'ಅಮ್ಮ'ನಿಗೆ ಮಗನಾಗಿ ತನ್ನ ಕರ್ತವ್ಯ ಪಾಲನೆ ಎಂಬಂತೆ ರತನ್ ತಾಯಿಯ ಶವಕ್ಕೆ ಸಂಸ್ಕಾರ ಮಾಡುತ್ತಾನೆ.

ಬದುಕಲು ಬೇಕಾಗಿರುವುದು ಸ್ನೇಹ, ಪ್ರೀತಿ, ವಿಶ್ವಾಸ, ನಂಬಿಕೆಯೇ ಹೊರತು ಧರ್ಮ, ಜಾತಿ, ಮತ್ತು ಅದಕ್ಕಾಗಿ ನಡೆಯುವ ಹೊಡೆದಾಟವೂ ಅಲ್ಲ ಎಂಬ ದೃಷ್ಟಿಯನ್ನು ಸಿಕಂದರ್ ಮಿರ್ಜಾ ಪಾತ್ರದಲ್ಲಿ ಕಂಡುಬಂದಿರುತ್ತದೆ.

ರತನ್ ತಾಯಿಯ ಪಾತ್ರದ ಮುಖಾಂತರ ಜೀವನ ಸಾರ್ಥಕವಾಗಿರಲು ಹೇಗಿರಬೇಕೆಂಬುದನ್ನು ಕಾಣಬಹುದು. ಬದುಕಿರುವ ತನಕ ಕಷ್ಟದಲ್ಲಿರುವರಿಗೆ ಸಹಾಯ ಮಾಡುತ್ತಾ ಅಪರಿಚಿತರಾಗಿಬಂದಂತಹ ಇಸ್ಲಾಂ ಧರ್ಮದ ಕುಟುಂಬವನ್ನು ತನ್ನ ಪರಿವಾರವೆಂದು ಪ್ರೀತಿ, ಸ್ನೇಹ, ಮಮತೆ, ವಾತ್ಯಲ್ಸವನ್ನು ಹಂಚುತ್ತಾಳೆ. ಪ್ರೀತಿ, ಸ್ನೇಹದಿಂದ ಕಲ್ಲನ್ನು ಕರಗಿಸಬಹುದೆಂಬ ದೃಷ್ಟಿಯನ್ನು ಕಾಣುತ್ತೇವೆ. ಆರಂಭದಿಂದ ಅಂತ್ಯದವರೆಗೆ ಒಂದೇ ರೀತಿಯಲ್ಲಿ ಗೌರವಾನ್ವಿತವಾಗಿ ವ್ಯಕ್ತಿಯಾಗಿ ಬಾಳುತ್ತಾಳೆ. ರಕ್ತಸಂಬಂಧವಿಲ್ಲದಿದ್ದರೂ, ಸ್ನೇಹ, ವಿಶ್ವಾಸ ಮತ್ತು

---

೧: ರಾ.ನ.ದ. (ಪುಟ–೫)

೨: ರಾ.ನ.ದ. (ಪುಟ–೨೮)

ಪೂರ್ಣದೃಷ್ಟಿಯ ವ್ಯಕ್ತಿತ್ವದಿಂದ ಯಾವುದೇ ಸಂಬಂಧವನ್ನಾದರೂ ನಿಭಾಯಿಸಬಹುದು ಮತ್ತು ಅದಕ್ಕೆ ಜಾತಿ, ಧರ್ಮ ಎಂಬ ಕಟ್ಟಳೆ ಇಲ್ಲದೆ ಸ್ವಚ್ಛಂದತೆ ದೃಷ್ಟಿಯನ್ನು ಕಾಣಬಹುದಾಗಿದೆ.

ಮೌಲ್ವಿ – ನಾಸಿರ್‌ರ ಪಾತ್ರಗಳಲ್ಲಿಯೂ ಇಂತಹದ್ದೇ ದೃಷ್ಟಿಯ ಅನಾವರಣವಾಗಿದೆ. 'ದಯೆ ಇಲ್ಲದ ಧರ್ಮ ಆವುದಯ್ಯ' ಎಂಬ ಬಸವಣ್ಣನ ನುಡಿಯಂತೆ ಮೌಲ್ವಿಯ ಜೀವನ ದೃಷ್ಟಿಯಾಗಿದೆ. ಖುರಾನ್‌ನಲ್ಲಿ ಬೇರೆ ಧರ್ಮದ ಜನರನ್ನು ದಯೆಯಿಂದ ಕಾಣಬೇಕು ಮತ್ತು ಖುರಾನ್ ಪವಿತ್ರ ಗ್ರಂಥದಲ್ಲಿರುವ ಪವಿತ್ರ ಸಂದೇಶವನ್ನು ಸಾರಿದ್ದಾರೆ.

ನಾಸಿರ್ ಪೂರ್ಣದೃಷ್ಟಿವುಳ್ಳ ಕವಿ. ಸುಂದರ ಜಗತ್ತಿನ ಪರಿಚಯದ ಜೊತೆಗೆ, ಅದರ ಹಿಂದಿರುವ ಕ್ರೌರ್ಯ ಜಗತ್ತನ್ನು ಪರಿಚಯಿಸುತ್ತಾರೆ. ತಮ್ಮ ಗಝಲ್ ಮುಖಾಂತರ ಮತ್ತು ಸಹಬಾಳ್ವೆಯಿಂದ ಕೂಡಿದ ಜೀವನ ನಡೆಸುವ ದೃಷ್ಟಿ ಅವರದ್ದಾಗಿರುತ್ತದೆ.

ತನ್ನೊ, ಹಮೀದಾಬೇಗಂ ದೇಶದಲ್ಲಿ ನಡೆಯುತ್ತಿರುವ ಹಿಂಸೆ, ಕ್ರೌರ್ಯ, ವಿಭಜನೆ, ಕೋಮುವಾದ ಎಲ್ಲವನ್ನು ಪ್ರಶ್ನಿಸುವ ದೃಷ್ಟಿಯನ್ನು ಒಳಗೊಂಡಿರುತ್ತಾರೆ.

ಹೀಗೆ ನಾಟಕಕಾರರ ದೃಷ್ಟಿಯನ್ನು ಈ ನಾಟಕದಲ್ಲಿ ಹೀಗೆ ಕಾಣಬಹುದು. 'ಜತೆಗಿರುವನು ಚಂದಿರ' ನಾಟಕದಲ್ಲಿ ನಾಟಕಕಾರರು – ಹಿಂದೂ–ಮುಸ್ಲಿಂ ಕೋಮುವಾದವೆಂಬ ಸಾಮಾಜಿಕ ಪಿಡುಗನ್ನು ಭಿನ್ನವಾದಂತಹ ವಿಧದಲ್ಲಿ ಹೇಳಿದ್ದಾರೆ. ಪರಂಪರೆ, ಪರಂಪರೆ ಎಂತಲೇ ಆರಂಭವಾಗುವ ನಾಟಕವು ಹೇಗೆ ಪರಂಪರೆಯಲ್ಲೇ ಜೀವನ ಸಾಗುತ್ತದೆ ಎಂಬುದನ್ನು ಹೇಳುತ್ತದೆ. ಮಾನವ ಬದುಕನ್ನು ನಿಯಂತ್ರಿಸಲು ದೇವರನ್ನು ಸೃಷ್ಟಿಸಿಕೊಂಡ. ಆ ದೇವರ ಪೂಜೆ, ಪುನಸ್ಕಾರದಿಂದ ಜಾತಿ–ಧರ್ಮಗಳು ಹುಟ್ಟಿಕೊಂಡವು. ಒಂದು ಹಂತದ ವರೆಗೆ ಎಲ್ಲವೂ ಸರಿಯಾಗಿಯೇ ನಡೆಯುತ್ತಿತ್ತು. ಜನರು ಹೆಚ್ಚು ವಿದ್ಯಾವಂತರಾಗುತ್ತಲೇ ಈ ಜಾತಿ–ಧರ್ಮವೇ ಬದುಕಿನ ಮಾನದಂಡವನ್ನಾಗಿಸಿತು. ನಂತರ ಈ ಜಾತಿ–ಧರ್ಮಗಳೇ ಬದುಕನ್ನು ನಿಯಂತ್ರಿಸುವಲ್ಲಿ ಯಶಸ್ವಿಯಾಯಿತು. ಮನುಷ್ಯನು ಜಾತಿ, ಧರ್ಮ ಎಂಬ ಭಯದಲ್ಲೇ ಜೀವನ ನಡೆಸುವ ಸ್ಥಿತಿ ಇವತ್ತಿನದು. ಹೆಚ್. ನರಸಿಂಹಯ್ಯ ಅವರು ಹೇಳುವಂತೆ **'ಭಯವಿಲ್ಲದ ಧರ್ಮಯಾವುದಯ್ಯ'** ಎಂಬ ಮಾತು ಅಕ್ಷರಃ ನಿಜ ಇವತ್ತಿನದ್ದಾಗಿದೆ. ಈ ದೃಷ್ಟಿಯಲ್ಲಿ ನಾಟಕವನ್ನು ನೋಡಬಹುದಾಗಿದೆ.

ಪರಂಪರೆ ಎಂಬ ಮಾನದಂಡವನ್ನು ಇಟ್ಟುಕೊಂಡು ಬದುಕುತ್ತಿದ್ದಂತಹ ಕುಟುಂಬದಲ್ಲಿ ಅಜ್ಞಾನವೇ ತುಂಬಿತು. ಶಕೂರ್ ಮಾಸ್ತರನ ಆಗಮನದಿಂದಾಗಿ ಹೆಣ್ಣುಮಕ್ಕಳಿಗೂ ವಿದ್ಯೆಯನ್ನು ಕೊಡಿಸಬೇಕು ಎಂಬುದು ತಿಳಿದಾಗ, ಆಶ್ಚರ್ಯವಾಯಿತು ಮತ್ತು ಅವರಿಗೆ ಅದೊಂದು ಹೊಸ ವಿಷಯವೇ ಆದಾಗಿತ್ತು.

"ಹೆಣ್ಮಕ್ಕಳಾದರೆ ಏನಾಯ್ತು. ನಾಳೆ ಮತ್ತೆ ಮಕ್ಕಳನ್ನು ಹೆತ್ತು ಬೆಳಸುವವರು ಅವರೇ, ಅವರಿಗೆ ಮುಖ್ಯವಾಗಿ ಶಿಕ್ಷಣ ಬೇಕು. ಪ್ರತಿ ಮನೆಯನ್ನು ರೂಪಿಸುವವರು ಅವರೇ"[೧]. ಎಂದು ಶಕೂರ್ ಹೇಳಿದ ಮಾತು ಹೊಸ ಸಮಾಜವನ್ನು ಕಟ್ಟಲು ನಾಂದಿಯಾಗುತ್ತದೆ.

೧: ಜ.ಚ. (ಪುಟ–೨೩)

ದೇಶದಲ್ಲಿ ಆಗುತ್ತಿದ್ದಂತಹ ದಂಗೆಗಳು, ಕೋಮುವಾದ ಮತ್ತು ದೇಶವಿಭಜನೆಯ ಹೊನ್ನಾರ ಇದು ಯಾವುದರ ಪರಿವೇ ಇಲ್ಲದಂತಹ ಮುಗ್ಧ ಕುಟುಂಬವು ತಮ್ಮದೇ ಆದಂತಹ ಲೋಕದಲ್ಲಿ ಜೀವಿಸುತ್ತಿದ್ದರು. **'ಬಡವರಿಗೆ ಆಯ್ಕೆಯ ಹಕ್ಕಿಲ್ಲ'** ಎಂಬ ಮಾತಿಗೆ ಒಪ್ಪಿ ಮಗಳ ಮದುವೆಯನ್ನು ಒಬ್ಬ ವಿಧುರನಿಗೆ ಕೊಡಲು ನಿಶ್ಚಯಿಸಿದ್ದರು. ಆದರೆ, ಮಗಳು ಆರ್ಷಿಯಾ ಪ್ರೀತಿಸಿದ ಶಫ್ಲಿಯೊಂದಿಗೆ ವಿವಾಹಮಾಡಲು ಬಡೇಮಿಯಾ ಒಪ್ಪಿದ್ದೇ ಒಂದು ಕ್ರಾಂತಿ. ಶಕೂರ್ ಮಾಸ್ತರನ ಪಾಠಕ್ಕೆ ಪ್ರಭಾವಿತಳಾದ ಶಬ್ನಂ ವಿಚಾರವಂತೆಯಾಗಿ ಬೆಳೆಯುತ್ತಾಳೆ. ಇವರಿಬ್ಬರ ಪ್ರೀತಿಗೂ ಅನುಮತಿಯನ್ನು ಕೊಟ್ಟು ಬಡೇಮಿಯಾ, ಮಕ್ಕಳ ಸುಖವನ್ನೇ ಬಯಸುವನಂತೆ ಕಾಣುತ್ತಾರೆ.

ಶಕೂರ್ ಮಾಸ್ತರ್ ಮಾತಿನಿಂದಲೇ ಗಾಂಧಿತತ್ತ್ವದ ಪ್ರತಿಪಾದನೆಯನ್ನು ನಾಟಕಕಾರರು ಮಾಡಿದ್ದಾರೆ. **"ವಿಭಜನೆ ಆಗೋದೇ ಹೌದು ಅಂತಾದರೆ ಅದು ಸಮರ್ಪಕವಾಗಿ ಆಗಬೇಕು. ನೋವಿಲ್ಲದೆ ಆಗಬೇಕು"**[೧] ಶಕೂರನ ಈ ಮಾತುಗಳಲ್ಲಿ ಪ್ರಜ್ಞಾವಂತ ನಾಗರಿಕರ ಸಮಾಜ ಹೇಗಿರಬೇಕು ಎಂಬ ದೃಷ್ಟಿಯನ್ನು ಕಾಣುತ್ತೇವೆ.

ಅನಂತರದಲ್ಲೇ ಪರಂಪರೆಯಿಂದ ಹೊರಬರಲಾರದಂತಹ ಜನರ ಸ್ಥಿತಿಯನ್ನು ಅಂದರೆ, ಅಂದಿನ ವಾಸ್ತವದ ದರ್ಶನವನ್ನು ನಾಟಕಕಾರರು ಮಾಡಿಸುತ್ತಾರೆ. ಸೈರಾ ಪಂಡಿತರ ಮಗನನ್ನು ಮದುವೆಯಾಗಿದ್ದು, ಪರಂಪರೆಯನ್ನು ಮೀರಿದ ಹಾಗೆ ಎಂದು ಮಗಳೊಂದಿಗೆ ಸಂಬಂಧವನ್ನು ಕಳೆದುಕೊಳ್ಳುತ್ತಾರೆ.

ಸಮಾಜದ ನಡುವೆ ಬದುಕುವ ವ್ಯಕ್ತಿ, ಜನರ ಮಾತಿಗೆ, ಮಾರ್ಯಾದೆಗೆ ಯಾವುತ್ತೂ ಅಂಜಿಯೇ ಬದುಕುತ್ತಿರುತ್ತಾನೆ. ಎಲ್ಲಾ ಸರಿಯಾಗಿಯೇ ನಡೆದು ಹೋಗುವಾಗ ಸಮಾಜದ ವಾತಾವರಣವೂ ಸಮಚಿತ್ತದಲ್ಲಿರುತ್ತದೆ. ಯಾವುದೋ ಒಂದು ಹೊಸ ವಿಚಾರದ ಬಗ್ಗೆ ಮಾತಾಡುವುದಾಗಲೀ ಅಥವಾ ಹೊಸ ಕಾರ್ಯವನ್ನು ಮಾಡಿದರೆ ಸಮಾಜದಲ್ಲಿ ಬದುಕುತ್ತಿರುವ ಜನರು ಅದನ್ನು ಒಪ್ಪಿಕೊಳ್ಳುವುದಿಲ್ಲ. ನಮ್ಮ ಸುತ್ತಲಿನ ಜನರು ಏನನ್ನುತ್ತಾರೋ ಎಂಬ ಅಂಜಿಕೆಯಲ್ಲೇ ಅದನ್ನು ತಿರಸ್ಕರಿಸುತ್ತಾರೆ. ತಮ್ಮ ಭಾವನೆ ಮತ್ತು ಮನಸ್ಸು ಏನನ್ನು ಹೇಳುತ್ತದೋ ಅದನ್ನು ಕೇಳುವ ಸ್ಥಿತಿಯಲ್ಲಿ ಜನರಿರುವುದಿಲ್ಲ. ಇದನ್ನು ಪರಂಪರೆ ಅಥವಾ ಸಮಾಜದ ಕಟ್ಟುಪಾಡಿನ ಬಂಧನ ಎಂದು ಹೇಳಬಹುದು. ಇದನ್ನು ನಾಟಕಕಾರರು ಹೇಳಿದ್ದಾರೆ.

ಅನಂತರದಲ್ಲಿ, ಊರಿನಲ್ಲಿ ದಂಗೆ ಹೆಚ್ಚಾದಾಗ ಮನೆ ಬಿಡುವ ಸಂದರ್ಭದಲ್ಲಿ ಮನೆಖಾಲಿ ಮಾಡಿ ಹೋಗುವಾಗ, ಮುನೀರ್ ಜಾನ್ ಮತ್ತೆ ಬಂದು ಮನೆ ಕಸಗುಡಿಸುತ್ತಾಳೆ. ಇದರ ಅರ್ಥ ಬಹುಶಃ ಪರಂಪರೆಯನ್ನೆಲ್ಲಾ ಗುಡಿಸಿ ಎಸೆದು, ಹೊಸ ಬದುಕಿಗೆ ಪಾದಾರ್ಪಣೆ ಮಾಡುವುದನ್ನು ತಿಳಿಸಬಹುದು.

**'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ'** – ಆಧುನಿಕ ನಾಟಕ, ದೇಶಕ್ಕೆ ಸ್ವಾತಂತ್ರ್ಯ ಬಂದು ೫೪ ವರ್ಷಗಳ ಬಳಿಕ ರಚಿತವಾದಂತಹ ನಾಟಕ ಇದಾಗಿದೆ. ಆಧುನಿಕತೆಯ ವಿಜ್ಞಾನ ಯುಗದಲ್ಲಿ ಕಾಲಿಟ್ಟರೂ, ಅದೇ ಹಿಂದೂ–ಮುಸ್ಲಿಂ ಕೋಮುವಾದ, ಇದರಿಂದ ಮುಕ್ತ ಸಮಾಜ ಇನ್ನೂ ಕಂಡಿಲ್ಲ.

---

೧: ಜ. ಚ. (ಪುಟ–೫೮)

ಸ್ವಾತಂತ್ರ್ಯ ಬಂದ ನಂತರ ಅಲ್ಪಸಂಖ್ಯಾತರಾಗಿ ಉಳಿದ ಇಸ್ಲಾಂ ಧರ್ಮಕ್ಕೆಂದೇ ಅಸಂಖ್ಯಾತರ ಸೌಲಭ್ಯವನ್ನು ಸರ್ಕಾರದವರು ಕೊಟ್ಟರು. ಆದರೆ, ಇದರ ದುರ್ಬಳಕೆಯನ್ನು ಇಸ್ಲಾಂ ಧರ್ಮದವರು ಮಾಡುತ್ತಿದ್ದಾರೆ ಎಂಬವಾದ ನಾಟಕದಲ್ಲಿನ 'ಮಹಾಬಲ' ಹೇಳುತ್ತಾನೆ. ಅಲ್ಪಸಂಖ್ಯಾತರ ದೌಜನ್ಯದಿಂದ ಮುಕ್ತವಾಗಲು ಹಿಂಸೆಯೊಂದೇ ಮಾರ್ಗವೆಂದು ಪ್ರತಿಪಾದಿಸುತ್ತಾನೆ.

ಗಾಂಧಿ ತತ್ತ್ವವಾದ **'ಈಶ್ವರ ಅಲ್ಲಾ ತೇರೇ ನಾಮ್'** ಎಂಬುದರ ವಿರುದ್ಧವಾದ ಕಾರ್ಯಾಚರಣೆಯೂ ಇಂದಿಗೂ ನಡೆಯುತ್ತಿದೆ.

ಈ ಕೋಮುಗಲಭೆ ಎಂಬುದು ಸೃಷ್ಟಿಯಾಗುವುದೇ ವಿದ್ಯಾವಂತ ಜನರುಗಳ ಮಧ್ಯದಲ್ಲಿ ಜಾತಿ, ಧಮವನ್ನು ಬುಡ ಸಮೇತ ಕಿತ್ತು ಹಾಕಬೇಕಾದ ಜನರೇ ಅದನ್ನು ಪೋಷಿಸುತ್ತಿದ್ದಾರೆ. ವಿಜ್ಞಾನಯುಗ, ಗಣಕ ಯುಗದಲ್ಲಿ ನಾವಿದ್ದೇವೆ. ಬೆರಳ ತುದಿಯಲ್ಲಿ ಪ್ರಪಂಚವಿದೆ, ಏನನ್ನು ಬೇಕಾದರೂ ಸಾಧಿಸಬಹುದಾದ ಕಾಲದಲ್ಲಿ ಇನ್ನೂ ಹಿಂದೂ-ಮುಸ್ಲಿಂ ಎಂಬ ಕೋಮುವಾದ ಒಂದು ಸಾಮಾಜಿಕ ಪಿಡುಗಾಗಿ ಇರುವುದನ್ನು ವಿಂಡಬನಾತ್ಮಕವಾಗಿ ಹೇಳಿದ್ದಾರೆ. ಮಹಾಬಲ ಎಂಬ ವಿದ್ಯಾವಂತ ಯುವಕ ಇದಕ್ಕೆ ಉದಾಹರಣೆಯಾಗಿದ್ದಾನೆ. ಇದಕ್ಕೆಲ್ಲಾ ಉತ್ತರವನ್ನು ನಾಟಕಕಾರರು ಅನ್ವರ್ ಪಾತ್ರದ ಮುಖಾಂತರ ತಂದಿದ್ದಾರೆ. ಅನ್ವರ್ ತನ್ನ ಪ್ರಾಣವನ್ನು ಕಾಪಾಡಿಕೊಳ್ಳಲು ಶ್ಯಾಮಭಟ್ಟರಮನೆಗೆ ಹೊಕ್ಕಿ, ಅನಂತನ ಸಲಹೆ ಮೇರೆಗೆ ತಾನೇ ಅನಂತ ಎಂದು ಹೇಳಿಕೊಂಡರೂ, ಆ ಪಾತ್ರವನ್ನು ನಿಭಾಯಿಸಲು ಕಷ್ಟವನ್ನು ಅನುಭವಿಸುತ್ತಾನೆ. ಅನಂತರದಲ್ಲಿ ಆ ಮನೆಯವರೆಲ್ಲಾರೂ ಮನೆ ಮಗ ಎಂತಲೇ ಸ್ವೀಕರಿಸುತ್ತಾರೆ. ಇಲ್ಲಿ ಜಾತಿ-ಧರ್ಮ ಎಂಬ ಸಿದ್ಧಾಂತವನ್ನು ಬುಡಮೇಲು ಮಾಡಿ, "ಸಂಬಂಧಗಳು ನಿಂತಿರುವುದು ನಂಬಿಕೆ ಮೇಲೆ ಹೊರತು ಸತ್ಯದ ಮೇಲಲ್ಲ"[೧] ಎಂಬ ಸಿದ್ಧಾಂತವನ್ನು ಪ್ರತಿಪಾದಿಸಿದ್ದಾರೆ.

ಮೂರು ನಾಟಕಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದಂತಹ ಅಂಶವೆಂದರೆ, ಮೂರು ನಾಟಕದಲ್ಲೂ ಹೇಳಲು ಹೊರಟಿರುವುದು ಕೋಮುವಾದವನ್ನು ವಿರೋಧಿಸಿ ಕೋಮುಸೌಹಾರ್ದತೆಯನ್ನೇ ಎತ್ತಿಹಿಡಿಯುವುದು ಸಮಾಜದಲ್ಲಿ ಸ್ವಾಸ್ಥ್ಯವನ್ನು ಕಾಪಾಡಲು ಕೋಮುವಾದವನ್ನು ಬುಡಸಮೇತ ಕಿತ್ತಿಹಾಕಬೇಕೆಂಬ ಸಂದೇಶವನ್ನೇ ಕೊಡುತ್ತಾರೆ. ಕೋಮುವಾದದ ಹಿನ್ನೆಲೆಯಲ್ಲಿ ನಡೆಯುವ ಹಿಂಸೆ, ಮೌಢ್ಯತೆ, ಧರ್ಮಾಂದತೆ ಎಲ್ಲವೂ ಹೇಳಿ ಕೊನೆಗೆ ಕೋಮು ಸೌಹಾರ್ದತೆಯನ್ನೇ ಎತ್ತಿಹಿಡಿಯುವ ಪ್ರಯತ್ನ ಇದಾಗಿದೆ.

### (ಈ) ಮೂರು ನಾಟಕಗಳಲ್ಲಿ ಅಭಿವ್ಯಕ್ತಿ:

ನಾಟಕವೊಂದಕ್ಕೆ ಅಭಿವ್ಯಕ್ತಿಯೂ ಒಂದು ಮುಖ್ಯವಾದ ಅಂಶ ವಸ್ತು, ಪಾತ್ರ, ಘಟನೆ, ಸನ್ನಿವೇಶಗಳು ಮನಸ್ಸನ್ನು ತುಂಬುವುದು ಅಭಿವ್ಯಕ್ತಿಯ ಮೂಲಕ. ನಾಟಕಕಾರರ ಚಾತುರ್ಯ, ಕ್ರಿಯಾಶೀಲತೆ ಎಲ್ಲವೂ ತಿಳಿದು

---

೧: **ಚೂ.ಕ. (ಪುಟ-೩೪)**

ಬರುವುದೇ ಅಭಿವ್ಯಕ್ತಿಯ ಕ್ರಮದಿಂದ ಪ್ರಸ್ತುತ 'ರಾವಿನದಿಯ ದಂಡೆಯಲ್ಲಿ', 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ', 'ಜತೆಗಿರುವನು ಚಂದಿರ' ಈ ಮೂರು ನಾಟಕಗಳು ವಾಸ್ತವಾಂಶದಿಂದ ಕೂಡಿದ ನಾಟಕಗಳು. ಹಾಗಾಗಿ ಸಹಜವಾಗಿ ಈ ಮೂರುನಾಟಕದಲ್ಲಿ ಅಭಿವ್ಯಕ್ತಿಯ ಕ್ರಮದಲ್ಲಿ ಭಿನ್ನತೆ ಕಂಡುಬರುತ್ತದೆ.

ಡಾ. ತಿಪ್ಪೇಸ್ವಾಮಿಯವರ ಅನುವಾದ ನಾಟಕ ಇದಾದರೂ, ಈ ನಾಟಕದ ಸಹಜತೆಗೆ ಎಲ್ಲೂ ಧಕ್ಕೆ ತಂದಿಲ್ಲ. ಈ ನಾಟಕದ ರಚನೆಯ ಸಂದರ್ಭವನ್ನು ಪರಿಗಿಣಿಸಿದರೆ ಕಾಲಮಿತಿ ಇದೆ. ಅಂದರೆ, ದೇಶಕ್ಕೆ ಸ್ವಾತಂತ್ರ್ಯ ಬಂದಂತಹ ಸಂದರ್ಭದಲ್ಲಿ ಹಿಂದೂ-ಮುಸ್ಲಿಂ ಅನುಭವಿಸಿದ ಸಂಕಟ, ನೋವು ಎಲ್ಲವನ್ನೂ ಚಿತ್ರಿಸಿದ್ದಾರೆ. ನಾಟಕವನ್ನು ಓದುವಾಗ ನಮ್ಮ ಕಣ್ಣಮುಂದೇನೇ ಇಂತದೊಂದು ಸನ್ನಿವೇಶಗಳು ಕಂಡುಬರುತ್ತದೆ ಎನ್ನುವಷ್ಟರಮಟ್ಟಿಗೆ ನಾಟಕವನ್ನು ಚಿತ್ರಿಸಿದೆ. ನಾಟಕವನ್ನು ಹೇಳುವ ದೃಷ್ಟಿಯು ಅತ್ಯಂತ ಸರಳವಾಗಿದ್ದು, ತಂತ್ರಗಳನ್ನು ಬಳಸದೆ ಅಚ್ಚುಕಟ್ಟಾಗಿದೆ. ಓದುಗರಿಗೆ ಒಂದೂ ಚೂರು ಗೊಂದಲವಾಗದಂತೆ ಚಿತ್ರಿಸಿದ್ದಾರೆ.

ಎಂಭತ್ತೊಂದು ಪುಟದಲ್ಲಿ ಇಡೀ ನಾಟಕವನ್ನು ಸರಳವಾಗಿ, ಓದುಗರಿಗೆ ನಾಟುವಂತೆ ಚಿತ್ರಿಸಿದ್ದಾರೆ. ಮತ್ತು ಕೋಮುಸೌಹಾರ್ದತೆ ಜೊತೆಗೆ, ಮಾನವತಾ ತತ್ತ್ವವನ್ನು ಎತ್ತಿ ಹಿಡಿದಿದ್ದಾರೆ. ಬದುಕಲು - ಜಾತಿ ಮುಖ್ಯವಲ್ಲ ಮನುಷ್ಯತ್ವ ಮುಖ್ಯ ಎಂಬುವುದನ್ನು ಅವರ ಅಭಿವ್ಯಕ್ತನಾ ಶೈಲಿಯಿಂದ ಹಿಡಿದಿಟ್ಟಿದ್ದಾರೆ.

ಪಾಕಿಸ್ತಾನದಲ್ಲಿ ನಡೆಯುವ ನಾಟಕ ಇದಾಗಿದೆ. ಇಸ್ಲಾಂ ಕುಟುಂಬದಲ್ಲಿ ಹಿಂದೂ ಹೆಂಗಸೊಬ್ಬಳ ಪಾತ್ರವನ್ನು ತಂದು ಅದರಲ್ಲಿ ಏರ್ಪಡುವ ಘರ್ಷಣೆ, ಗಲಾಟೆ ಮತ್ತು ಪ್ರೀತಿ ಆಕ್ಕರೆ ಎಲ್ಲವನ್ನು ತೆರೆದಿಟ್ಟಿದ್ದಾರೆ. ರತನ್ ತಾಯಿಯನ್ನೇ ಮನೆಬಿಟ್ಟು ಓಡಿಸುವಂತಹ ಸಂದರ್ಭದಲ್ಲಿ ಕೆಲವು ಅವಾಚ್ಯ ಶಬ್ದಗಳನ್ನು ಬಳಸಿದ್ದಾರೆ.

**"ನಾನು ಈಕೆಯ ಜುಟ್ಟು ಹಿಡ್ಕೊಂಡು ಹೊರಗೆ ದಬ್ತೀನಿ ನೋಡ್ತಿರಿ.........ಅಲ್ಲಿಗೆ ಮುಗಿಯುತ್ತೆ ಇವಳ ಕತೆ.........."**

**"ಕಲ್ಲು ಹೃದಯದ ಹೆಂಸಗು, ದೆವ್ವ........."**[೧] ಎಂದು ಹಮೀದಾ ಬೇಗಂ ಹೇಳುವ ಮಾತಿನಲ್ಲಿ ನೋಡುಬಹುದು. ಇದು ಅಶ್ಲೀಲಪದಗಳಲ್ಲದಿದ್ದರೂ, ಅವರು ಅನುಭವಿಸುತ್ತದ್ದ ದುಃಖದಿಂದ ಹೊರ ಬಂದಂತಹ ಮಾತು ಇದನ್ನೆಬಹುದು. ನಂತರದಲ್ಲಿ ರತನ್ ತಾಯಿಯೊಂದಿಗೆ ಬೆರೆಯಲಾರಂಭಿಸುತ್ತಾರೆ. ಲಾಹೋರ್ ಪಟ್ಟಣದ ಪರಿಚಯವೂ ಇವರ ಮಾತಿನ ಮುಖಾಂತರ ಚಿತ್ರಿಸುತ್ತಾರೆ. ಪಡವಲ ಕಾಯಿ, ಹತ್ತಿ ವಿಳ್ಳೆದೆಳೆ ಬಗ್ಗೆ ವಿವರವನ್ನು ತಿಳಿದುಕೊಳ್ಳುತ್ತಾರೆ. ಈ ಸಹಜ ಮಾತಿನ ಮುಖಾಂತರ ಅವರಲ್ಲಿ ಆತ್ಮೀಯತೆ ಹೆಚ್ಚಾಗಲೂ ಕಾರಣವಾಗುತ್ತದೆ. ಅನಂತರದಲ್ಲಿ ರತನ್ ತಾಯಿಯನ್ನು 'ಅಮ್ಮ' ಎಂದು ಎಲ್ಲರೂ ಅವಳನ್ನು ಗೌರವದಿಂದ ಕಾಣಲು ಮುಂದಾಗುತ್ತಾರೆ.

ನಾಸಿರ್ ಕವಿಯ ಮುಖಾಂತರ ಗಜಲ್ ಅನ್ನು ತಂದಿದ್ದಾರೆ. ಹಿಂದಿ ನಾಟಕದ ಅನುವಾದದ್ದರಿಂದ ಹಿಂದಿಯ ಪ್ರಭಾವ ಇಲ್ಲಿದೆ.

---

೧: ರಾ.ನ. (ಪುಟ-೧೭)

"ಊರಿಗೆ ಊರೇ ಹೊತ್ತಿ ಉರಿಯುತ್ತಿದ್ದರೂ ನೋಡಿ

ನಲಿವು ಚೆಲುವುಗಳು ಹೇಗೆ ಮೆರೆದಿಹವು ನೋಡಿ".

ಈ ರೀತಿಯಾಗಿ ಗಜ಼ಲ್ ಪ್ರಭಾವವನ್ನು ತಂದಿದ್ದಾರೆ. ಓದಲು ಸರಳವಾಗಿದ್ದರೂ ದೇಶದ ಸ್ಥಿತಿಯನ್ನು ವಿಡಂಬನಾತ್ಮಕವಾಗಿ ಹೇಳಿದ್ದಾರೆ.

ಪೈಲ್ವಾನ್ ಪಾತ್ರದಿಂದ ಸಮಾಜಲ್ಲಿರುವ ದುಷ್ಟವ್ಯಕ್ತಿಗಳ ಬಗ್ಗೆ ಹೇಳಿದ್ದಾರೆ. ಧರ್ಮಾಂಧತೆಯಿಂದ ಕೂಡಿದ ಪಾತ್ರ ಇದಾಗಿದ್ದು, ಬದಲಾವಣೆಯನ್ನು ಅಥವಾ ಹೊಸ ಸಮಾಜದ ಉದಯಕ್ಕೆ ಅಡ್ಡಗಾಲು ಹಾಕುವ ಪಾತ್ರ ಇದಾಗಿದೆ.

ಮೌಲ್ವಿಯ ಪಾತ್ರಚಿತ್ರಣವು ಅತ್ಯಂತ ಸಹಜವಾಗಿದ್ದು, ಒಬ್ಬ ಮೌಲ್ವಿಯು ಮಾಡಬೇಕಾದಂತಹ ಕರ್ತವ್ಯವನ್ನು ಸಹಜವಾಗಿ ಮತ್ತು ಸತ್ಯತೆಯಿಂದ ಮಾಡಿಸಿದ್ದಾರೆ.

**"ಬೇರೆಯವರು ನಿನ್ನ ದೈವವನ್ನು ದೂಷಿಸದಂತಿರಲು ನೀನು ಅವರ ದೈವಗಳನ್ನು ದೂಷಿಸಬೇಡ"**[೧] ಎಂದು ಮೌಲ್ವಿಗಳ ಕೈಯಲ್ಲಿ ಹೇಳಿಸುತ್ತಾರೆ. ಮತ್ತು ರತನ್ ತಾಯಿಯ ಶವ ಸಂಸ್ಕಾರವನ್ನು ಹಿಂದೂ-ಧರ್ಮದ ಪ್ರಕಾರ ಮಾಡಿಸಿದರು ಎಂದು ಓದಿದಾಗ ಅಸಹಜವೆಂಬಂತೆ ಕಂಡುಬಂದರೂ, ಸಮಾಜಕ್ಕೆ ಒಂದು ಆಶಾದಾಯಕ ಸಂದೇಶವಾಗಿ ತಂದಿದ್ದಾರೆ. ರತನ್ ತಾಯಿ ತೀರಿ ಹೋದಾಗ ಎಲ್ಲರೂ ಸ್ವಂತ ತಾಯಿಯನ್ನು ಕಳೆದುಕೊಂಡವರಂತೆ ದುಃಖಿಸುತ್ತಾರೆ. **"ಈ ಜೀವಂತ ಜನರನ್ನು ಹೆಣಗಳನ್ನಾಗಿ ಮಾಡ್ಬೇಡಿ"**[೨] ಎಂದು ನಾಸಿರ್ ಕವಿ ಹೇಳುವಾಗ ಅತಿಶಯೋಕ್ತಿಯಂತೆ ಕಂಡುಬಂದರೂ, ರತನ್ ತಾಯಿಯ ವ್ಯಕ್ತಿತ್ವವನ್ನು ಗುರುತಿಸಿದಾಗ ಅದು ಸಹಜ ನುಡಿ ಎಂದು ತಿಳಿಯುತ್ತದೆ.

'ಜತೆಗಿರುವನು ಚಂದಿರ' ನಾಟಕದಲ್ಲಿ – ನಾಟಕಕಾರರು ಅನೇಕ ತಂತ್ರಗಳನ್ನು ಬಳಸಿಕೊಂಡು ನಾಟಕ ರಚಿಸಿದ್ದಾರೆ. ಹೇಳುತ್ತಿರುವ ಸಂಗತಿಯೊಂದಾದರೆ, ಅದರಿಂದ ಹೊರಬರುವಂತಹ ಅರ್ಥಇನ್ನೊಂದಾಗಿರುತ್ತದೆ. ಓದಲು ಸುಲಭರೀತಿಯಲ್ಲಿ ಚಿತ್ರಿಸಿದ್ದಾರೆ. ಆದರೆ ಅದರೊಳಗಿನ ಅರ್ಥ ಇನ್ನೊಂದಾಗಿದೆ. ಸಮಾಜಕ್ಕೆ ಸಂದೇಶವನ್ನು ಕೊಡಲು ಅನೇಕ ಹಾಡುಗಳನ್ನು ತಂದಿದ್ದಾರೆ. ಇದೂ ಕೂಡ ಒಂದು ತಂತ್ರವಾಗಿಯೇ ಇದೆ. ಇಂಭತ್ತನಾಲ್ಕು ಪುಟಗಳುಳ್ಳ ನಾಟಕದಲ್ಲಿ ಬರುವ ಪಾತ್ರಗಳು ಕೆಲವೇ ಆದರೂ ಅದು ನಿರ್ವಹಿಸುವ ಪಾತ್ರಗಳು ವಿಭಿನ್ನ. ಅವರದ್ದೇ ಆದಂತಹ ವ್ಯಕ್ತಿತ್ವದಿಂದ ಸಮಾಜಕ್ಕೆ ಒಂದು ಸಂದೇಶವನ್ನು ಕೊಡುವಂತೆ ಕಾಯ್ಕಿಣಿಯವರು ಚಿತ್ರಿಸಿದ್ದಾರೆ.

ಈ ನಾಟಕದಲ್ಲಿ ಕಾಲಘಟ್ಟ ಮತ್ತು ಸ್ಥಳ ಎರಡರ ಮಿತಿಯೂ ಇದೆ. ಅಂದರೆ ಸ್ವತಂತ್ರದ ಸಂದರ್ಭದಲ್ಲಿ ನಡೆದಂತಹ ನಾಟಕ ಅದು ಕರಾವಳಿಯಲ್ಲಿ ನಡೆಯುತ್ತದೆ ಎಂದು ನಾಟಕಕಾರರೇ ಹೇಳಿದ್ದರೂ, ಇದು ಇಡೀ ದೇಶದಲ್ಲಿ ಜರಗುವಂತಹ ವಿಷಯ ಅಂದರೆ ಇಂದಿಗೂ ಪ್ರಸ್ತುತವಾದಂತಹ ವಿಷಯವನ್ನೇ ಹೇಳಿದ್ದಾರೆ.

---

**೧: ರಾ.ನ.ದ. (ಪುಟ-೫೮)**

**೨: ರಾವಿನದಿಯ ದಂಡೆಯಲ್ಲಿ (ಪುಟ-೬೫)**

ಹೇಳುವ ಶೈಲಿಯು ಸರಳವಾಗಿಯೇ ಮೂಡಿ ಬಂದಿದೆ. ಅದರಿಂದ ಬರುವ ಅರ್ಥವನ್ನು ಓದುಗರೇ ಕಂಡುಕೊಳ್ಳಬೇಕು ಎನ್ನುವ ನಿಲುವು ಕೆಲವು ಸನ್ನಿವೇಶದಲ್ಲಿ ಬರುತ್ತದೆ. ಹಾಡಿನಿಂದಲೇ ಪ್ರಾರಂಭವಾಗುವ ನಾಟಕವು, ಮಧ್ಯ-ಮಧ್ಯದಲ್ಲಿ ಹಾಡಿನ ಮುಖಾಂತರ ಹೊಸದೊಂದು ಕನಸುಕಾಣುವ ಅಥವಾ ವಾಸ್ತವದ ಸಂಗತಿ ತಿಳಿಸಲು ಇದನ್ನು ತಂತ್ರವಾಗಿ ಬಳಸಿದ್ದಾರೆ.

**"ಉಡುಗೆ ತೊಡುಗೆ ನಡಿಗೆ ಎಲ್ಲದಕ್ಕೂ ಪರಂಪರೆ,**

**ಈಚಪ್ಪಲಿ, ಈ ಅತ್ತರು ಅಷ್ಟೇ ಯಾಕೆ**

**ಹಬ್ಬದ ಸಿಹಿ ಶಾವಿಗೆ**

**ಮೀನಿನ ಅಡುಗೆ........... ಎಲ್ಲದಕ್ಕೂ ಪರಂಪರೆ"**

ಈ ಪರಂಪರೆಯ ಹಾಡಿನ ಮುಖಾಂತರ ನಾಟಕ ಆರಂಭವಾಗುತ್ತದೆ. ಪರಂಪರೆ ಹೆಸರಿನಲ್ಲಿ ತಮಗೆ ತಾವೇ ಮೋಸಮಾಡಿಕೊಳ್ಳುತ್ತಿರುವ ಜನರ ಜೀವನವನ್ನು ಹೇಳುವ ಪ್ರಯತ್ನ ಇಲ್ಲಿದೆ.

ಸ್ವಾತಂತ್ರ್ಯದ ಹೆಸರಿನಲ್ಲಿ ನಡೆಯುತ್ತ ಅನ್ಯಾಯವನ್ನು ಶಕೂರ್ ಮಾಸ್ತರನಿಂದ ತಿಳಿಸುತ್ತಾರೆ ನಾಟಕಕಾರರು. ತಿಳುವಳಿಕೆ ಇಲ್ಲದ ಜನರಲ್ಲಿ ತಿಳುವಳಿಕೆ ಮೂಡಿಸುವ ಪ್ರಯತ್ನ ಮತ್ತು ಹೊಸದೊಂದು ಕ್ರಾಂತಿಯನ್ನು ನಾಟಕಕಾರರು ಅವರ ಅಭಿವ್ಯಕ್ತಿಯ ಸಾಮರ್ಥ್ಯದಿಂದ ತಂದಿದ್ದಾರೆ. ಮುಸ್ಲಿಂ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಿಸುವುದು ಮತ್ತು ಪ್ರೀತಿಸಿದ ಹುಡುಗರೊಂದಿಗೆ ಮದುವೆ ಮೂಡಿಸುವುದು ಎಲ್ಲವನ್ನು ನಾಟಕದಲ್ಲಿ ತಂದಿದ್ದಾರೆ.

ಶಕೂರ್ ಮಾಸ್ತರನಿಂದ ನಿಜವಾದ ದೇಶವಾಸಿ ಹೇಗಿರಬೇಕೆಂದು ತಿಳಿಸುತ್ತಾರೆ.

**"ದೇಶಕ್ಕಾಗಿ ಧ್ಯೇಯಕ್ಕಾಗಿ ಸಾಯಬಲ್ಲೆ ನಾನು"**[೧] ಜಾತಿ-ಧರ್ಮದಿಂದ ಹಾಳಾಗುತ್ತಿರುವಂತಹ ದೇಶವನ್ನು ಕಾಪಾಡಬೇಕೆಂಬ ನಿಲುವನ್ನು ತಿಳಿಸಿದ್ದಾರೆ.

ಮತ್ತೆ ಮಧ್ಯದಲ್ಲಿ ಹಾಸ್ಯದ ಸನ್ನಿವೇಶವನ್ನು ತಂದಿದ್ದಾರೆ. ಅದು ನವಿರಾದ ಹಾಸ್ಯ. ಬಡೇಮಿಯಾ ಮಗಳನ್ನು ಕಲ್ಯಾಭ್ಯಾ ಮದುವೆಯಾಗಲು ಕೇಳಿದಾಗ, ಬಡೇಮಿಯಾ ತನ್ನ ಬಳಿ ಇರುವ ಕೋಳಿಯನ್ನು ಕೇಳುತ್ತಿದ್ದಾನೆಂದು ಭಾವಿಸಿ ಮಾತಾಡುವಾಗ ಹಾಸ್ಯದ ಸನ್ನಿವೇಶ ಉಂಟಾಗುತ್ತದೆ. ಇದು ಒಂದು ಅಭಿವ್ಯಕ್ತಿಯ ಸಾಮರ್ಥ್ಯವಾಗಿದೆ.

'ಸೈರಾ' ಮದುವೆ ಆಗಿದ್ದು ಹಿಂದೂ ಹುಡುಗನನ್ನು ಇದು ಸಮಾಜಕ್ಕೆ ಕೊಡುವ ಹೊಸದೊಂದು ಸಂದೇಶವಾಗಿದೆ. ಇದೆಲ್ಲಾ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಮೈಗೂಡಿಸಿಕೊಂಡು ನಾಟಕದ ಮುಖಾಂತರ ಭಿತ್ತರಿಸಿದ್ದಾರೆ.

---

೧: ಜ.ಚ. (ಪುಟ-೬೦)

**'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ'** ನಾಟಕವು ಓದುಗರಿಗೆ ಸ್ವಲ್ಪ ಕ್ಲಿಷ್ಟವಾಗಿದೆ ಮತ್ತು ಅರ್ಥಮಾಡಿಕೊಳ್ಳಲು ಸ್ವಲ್ಪ ಕಷ್ಟವಾಗಿಯೇ ಇದೆ. **'ಹೀಗೊಂದು ಹೊಸ ಸಮಾಜವು ನಿರ್ಮಾಣವಾಬೇಕು"** ಎಂಬ ಧೋರಣೆಯನ್ನು ಇಟ್ಟುಕೊಂಡು ನಾಟಕಕಾರರು ಈ ನಾಟಕವನ್ನು ಚಿತ್ರಿಸಿದ್ದಾರೆ. ಅವರ ಆಶಾವಾದ ಮತ್ತು ವಾಸ್ತವದ ಚಿತ್ರಣ ಎರಡೂ ನಾಟಕದಲ್ಲಿ ಅಭಿವ್ಯಕ್ತಿಗೊಂಡು ವಿಡಂಬನೆಗೆ ಒಳಗಾಗಿದೆ. ನಾಟಕವು ಅನೇಕ ವಿಡಂಬನಾತ್ಮಕ ಕತೆಯಿಂದಲೇ ಕೂಡಿದೆ. ಅನೇಕ ತಂತ್ರಗಳನ್ನು ಬಳಸಿಕೊಂಡು ಅದರಿಂದ ಹೇಳಬೇಕಾದ ವಿಷಯವನ್ನು ಹೇಳುವಲ್ಲಿ ನಾಟಕಕಾರರು ಯಶಸ್ವಿಯಾಗಿದ್ದಾರೆ. ಅರವತ್ತೇಳು ಪುಟಗಳನ್ನು ಒಳಗೊಂಡಂತಹ ನಾಟಕದಲ್ಲಿ ಆಧುನಿಕ ಭಾರತದ ಚಿತ್ರಣ ಒಂದು ಕಡೆಯಾದರೆ ಅನಾದಿ ಕಾಲದಿಂದಲೂ ನಡೆದು ಬಂದಿರುವಂತಹ ಹಿಂದೂ-ಮುಸ್ಲಿಂ ಕೋಮುವಾದವನ್ನು ಇನ್ನೊಂದು ಕಡೆ ಹೇಳಿದ್ದಾರೆ. ಹಿಂದೂ-ಮುಸ್ಲಿಂ ಕೋಮುವಾದ ಒಂದು ಕಡೆಯಾದರೂ ಹಿಂದೂ ಧರ್ಮದಲ್ಲಿ ಇರುವಂತಹ ಸಂಘರ್ಷವನ್ನು ಎತ್ತಿಹಿಡಿದ್ದಾರೆ. ಶ್ಯಾಮಭಟ್ ಮತ್ತು ಮಹಾಬಲರ ಪಾತ್ರದಲ್ಲಿ ತಲೆಮಾರಿನ ಅಂತರವಿದ್ದು, ಅವರ ಕಲ್ಪನೆಯಲ್ಲೇ ಹಿಂದೂ ಧರ್ಮವು ಎರಡು ಕವಲನ್ನು ಒಡೆದು ಕೊಂಡಿದೆ. ಇವರ ನಡುವಿನ ಸಂಘರ್ಷವನ್ನು ಹೇಳಿದ್ದಾರೆ.

ನಾಟಕದ ಉದ್ದೇಶವನ್ನು ಈಡೇರಿಸಲು ಬಳಸಿಕೊಂಡಂತಹ ಪಾತ್ರ ಅನಂತನದ್ದು. ಒಂದು ಕುಟುಂಬದಲ್ಲಿ ಇರಬೇಕಾದಂತಹ ಭಾವನಾತ್ಮಕ ಸಂಬಂಧಗಳನ್ನು ತಂದಿದ್ದಾರೆ. ಸ್ವತಂತ್ರವಾಗಿ ಬೆಳೆದು ಅಂತಿಮ ಗುರಿಯನ್ನು ಮುಟ್ಟುವ ಪಾತ್ರವೆಂದರೆ ಶ್ಯಾಮಭಟ್ಟರದು. ಉಳಿದೆಲ್ಲಾ ಪಾತ್ರಗಳಲ್ಲೂ ಆದರದ್ದೇ ಆದ್ದಂತಹ ಮಿತಿಯನ್ನು ಒಳಗೊಂಡಿವೆ.

ಊರಿನ ನಾಡ ಹಬ್ಬದ ಆಚರಣೆಯನ್ನು ಪ್ರಸ್ತಾಪಮಾಡಿದ್ದಾರೆ. ಮತ್ತು ನಾಟಕದ ಶೀರ್ಷಿಕೆಯ ಬಗ್ಗೆ ಓದುಗರಿಗೆ ಉಂಟಾಗುವ ಗೊಂದಲ ನಿವಾರಣೆ ಮಾಡಲು ವಿವರಣೆಯನ್ನು ಕೊಟ್ಟಿದ್ದಾರೆ.

ಹಿಂದೂ ಹುಡುಗಿ – ಮುಸ್ಲಿಂ ಹುಡುಗನನ್ನು ಪ್ರೀತಿಸಿದ್ದೇ ತಪ್ಪೆಂಬುವಂತೆ ಈಡೀ ನಾಟಕದಲ್ಲಿ ಚಿತ್ರಣ ದೊರೆಯುತ್ತದೆ. ಅಂದರೆ, ಪ್ರೀತಿಗಿಂತ ಅವರಿಗೆ ಧರ್ಮ ಹೆಚ್ಚಿನದು ಎಂಬ ಧೋರಣೆ ಇದಕ್ಕೆ ಪೂರಕವೆಂಬಂತೆ ಮಹಾಬಲನೂ ಅನೇಕ ಸತ್ಯದ ಸಂಗತಿ ಎಂದು ಹೇಳುತ್ತಾನೆ.

ಅನಂತ ನೋಡಿದೆ ಎಂದು ಹೇಳಿದ 'ಸಿಟಿಝುನ್ ಕೇನ್' ಎಂಬ ಚಿತ್ರದಲ್ಲಿ ಹೇಳಿದಂತಹ 'ಋಣಾನುಬಂಧ' ಎಂಬುವುದನ್ನು ನಾಟಕಕ್ಕೆ ಸರಿಹೊಂದುವಂತೆ ಆ ಸನ್ನಿವೇಶವನ್ನು ತರುತ್ತಾರೆ. ಮತ್ತು ರವೀಂದ್ರನಾಥ ಟಾಗೋರ್ ರವರ 'ಗೋರಾ' ಕಾದಂಬರಿಯ ವಿಷಯವನ್ನು ಪಾತ್ರದ ಸನ್ನಿವೇಶಕ್ಕೆ ತಕ್ಕ ಹಾಗೆ ಚಿತ್ತಿಸಿದ್ದಾರೆ. ಇದು ಅವರ ಅಭಿವ್ಯಕ್ತನಾಸಾಮರ್ಥ್ಯವನ್ನು ತಿಳಿಸುತ್ತದೆ.

ಕೋಮುವಾದ, ದಂಗೆ, ಉಪಟಳ ಎಲ್ಲವನ್ನು ಹೇಳುವಾಗ ಮಧ್ಯದಲ್ಲಿ ಹಾಸ್ಯಮಯ ದೃಶ್ಯವಾಗಿ ಅನ್ವರ್ ಮತ್ತು ಕುಟ್ಟಿಯ ಸಂಭಾಷಣೆಯನ್ನು ತಂದಿದ್ದಾರೆ. ನಾಟಕದ ಮತ್ತೊಂದು ವಿಶೇಷ ಎಂದರೇ ಅಲ್ಲಿ ಬಳಸಿ ಕೊಂಡಂತಹ 'ಹವ್ಯಕ ಭಾಷೆ' – ತುಂಬಾ ಸೊಗಸಾಗಿ ಮೂಡಿಬಂದಿದೆ.

ಅನಂತ ಮತ್ತು ತಂದೆಯ ಸಂಬಂಧದ ಮಹಾಪೂರವನ್ನೇ ಹರಿಸಿದ್ದಾರೆ. ಇಬ್ಬರಲ್ಲೂ ಇರುವ ಸಾಮ್ಯತೆ, ಮತ್ತು ಭಿನ್ನತೆ, ಮನಸ್ತಾಪ ಎಲ್ಲವನ್ನೂ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ವಿಚಾರವಂತಿಕೆಯಿಂದಲೇ ಕೊಡಿದಂತಹ ಪಾತ್ರವಾದ ಶ್ಯಾಮಭಟ್ಟರು ನಾಟಕದ ಅಂತಿಮತೀರ್ಪು ಎಂಬಂತೆ, ಅನ್ವರ್‌ನನ್ನು ತಮ್ಮ ಮನೆಯಲ್ಲೇ ಉಳಿಸಿಕೊಳ್ಳಬೇಕೆಂದು ನಿರ್ಧರಿಸುತ್ತಾರೆ. ಇದು ನಾಟಕಕಾರರ ಅಭಿವ್ಯಕ್ತಾನ ಶೈಲಿಗೆ ಸಾಕ್ಷಿಯಾಗಿದೆ.

ಅನಂತ ಹೇಳುವಂತೆ ಸಂಬಂಧ ನಿಂತಿರುವುದು ಸತ್ಯದ ಮೇಲಲ್ಲ, ನಂಬಿಕೆಯ ಮೇಲೆ' ಎಂಬ ಮಾತಿನಂತೆ ಶ್ಯಾಮಭಟ್ಟರು ನಡೆದುಕೊಳ್ಳುತ್ತಾರೆ.

ವ್ಯಕ್ತಿ ಯಾವ ಜಾತಿಯವನೇ ಆದರೇನು ಅವನನ್ನು ನಮ್ಮವನು ಎಂದು ಕೊಳ್ಳುವ ಮನಸ್ಥಿತಿಯು ಬೇಕೆಂದು ಹೇಳಿದ್ದಾರೆ. ಇದು ನಾಟಕಕಾರರ ಆಶಯ. ಇದನ್ನು ಅಭಿವ್ಯಕ್ತಿಸುವ ರೀತಿ ಸೊಗಸಾಗಿದೆ.

ಪಾತ್ರ ಪೋಷಣೆಯಲ್ಲಿ ಮುಖ್ಯಪಾತ್ರಗಳಂತೆಯೇ ಉಪಪಾತ್ರಗಳೂ ನೆನಪಿನಲ್ಲುಳಿಯುವಂತೆ ಮಾಡುವ ಶಕ್ತಿ ನಾಟಕಕಾರರಲ್ಲಿದೆ. ವಸ್ತುವೊಂದನ್ನು ಆಯ್ಕೆಮಾಡಿಕೊಂಡು ಪಾತ್ರಗಳಲ್ಲಿ ಅಳವಡಿಸಿ, ಅದನ್ನು ನೋಡುವ ದೃಷ್ಟಿಕೋನ, ಅಭಿವ್ಯಕ್ತಿಸುವ ಒಂದು ಕೃತಿಯಾಗಲಿ, ನಾಟಕವಾಗಲಿ ಪರಿಪೂರ್ಣವಾಗುತ್ತದೆ. ಈ ನಾಲ್ಕು ಹಂತವನ್ನು ಈ ಮೂರು ನಾಟಕಗಳಲ್ಲಿಯೂ ಕಾಣಬಹುದಾಗಿದೆ.

* * *

## ಅಧ್ಯಾಯ-೭

# ಸಾಹಿತ್ಯಿಕ ಪ್ರಾಮುಖ್ಯತೆ

ಯಾವುದೇ ಸಾಹಿತ್ಯಕೃತಿ, ಕತೆಯಾಗಲಿ, ನಾಟಕವಾಗಲಿ ಸಮಾಜದ ಆಗು-ಹೋಗುಗಳನ್ನು ತನ್ನ ಒಡಲಿನಲ್ಲಿ ಅಂತರ್ಗತಗೊಳಿಸಿಕೊಂಡು, ಅದನ್ನು ಪ್ರತಿಬಿಂಬಿಸುತ್ತದೆ. ಒಂದು ನಾಟಕವು ಸಮಾಜಕ್ಕೆ ಯಾವ ಸಂದೇಶವನ್ನು ಕೊಡಲು ಬಯಸುತ್ತದೆ? ಜೀವನದ ಯಾವ ಅಂಶಕ್ಕೆ ಹೆಚ್ಚಿನ ಒತ್ತನ್ನು ನೀಡಿದೆ? ಯಾವ ದೃಷ್ಟಿಯಿಂದ ಜೀವನವನ್ನು ವಿಶ್ಲೇಷಣೆ ಮಾಡುತ್ತಾರೆ? ಮತ್ತು ಈ ಎಲ್ಲಾ ಅಂಶಗಳನ್ನು ಒಳಗೊಂಡಂತಹ ನಾಟಕಗಳಲ್ಲಿ ಯಾವ ನಾಟಕವು ಸಾಹಿತ್ಯಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ, ಯಾವ ದೃಷ್ಟಿಯಿಂದ ನಾಟಕವು ಸೋಲುತ್ತದೆ ಎಂಬುದನ್ನು ಇಲ್ಲಿ ತಿಳಿಯಲಾಗಿದೆ.

ಪ್ರಸ್ತುತ 'ರಾವಿನದಿಯ ದಂಡೆಯಲ್ಲಿ', 'ಜತೆಗಿರುವನು ಚಂದಿರ', 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ನಾಟಕಗಳಲ್ಲಿ ಮುಖ್ಯವಾಗಿ ಕೋಮು ಸೌಹಾರ್ದತೆಯನ್ನೇ ತಮ್ಮ ವಸ್ತುವನ್ನಾಗಿಸಿಕೊಂಡಿದ್ದಾರೆ. ಆದರೆ, ಇವು ಒತ್ತು ಕೊಟ್ಟಿರುವ ಅಂಶಗಳು ಬೇರೆ-ಬೇರೆಯಾಗಿವೆ. ಕೋಮುವಾದ ಎಂಬುದು ಜನರ ಜೀವನದಲ್ಲಿ ಮುಖ್ಯವಾದ ಪಾತ್ರವನ್ನು ವಹಿಸುತ್ತದೆ ಪ್ರಸ್ತುತದಲ್ಲಿ ಕೋಮುವಾದ ಎಂಬುದು ಜನರ ಜೀವನವನ್ನು ಮೀರಿ ಬೆಳೆಯುವ ರೀತಿಯು ಮೂರು ನಾಟಕಕಗಳಲ್ಲೂ ಬರುವುದು ಮುಖ್ಯವಾದ ಅಂಶ.

'ರಾವಿನದಿಯ ದಂಡೆಯಲ್ಲಿ' ನಾಟಕವು ಅನೇಕ ರೀತಿಯಿಂದ ಮಹತ್ವದ ನಾಟಕವಾಗಿದೆ. ಎಲ್ಲಾ ರೀತಿಯ ವರ್ಗದ ಓದುಗರನ್ನು ತನ್ನೆಡೆಗೆ ಸೆಳೆದುಕೊಳ್ಳುತ್ತದೆ. ಸಮಾಜದಲ್ಲಿ ನಡೆಯುವ ವಾಸ್ತವಿಕ ಘಟನೆಯನ್ನೇ ಆಧರಿಸಿ ಬರೆದಂತಿದೆ. ದೇಶಕ್ಕೆ ಸ್ವಾತಂತ್ರ ಸಿಕ್ಕಿದ ತದನಂತರದಲ್ಲಿ ದೇಶದ ಪರಿಸ್ಥಿತಿ ಮತ್ತು ಎದುರಾದಂತಹ ಸಮಸ್ಯೆ, ಸನ್ನಿವೇಶಗಳನ್ನು ಆಧರಿಸಿ ಕತೆಯನ್ನು ಹೆಣೆಯಲು ಪ್ರಯತ್ನಿಸಿದ್ದಾರೆ. ಸಾಮಾಜಿಕ ಜೀವನ, ಸಂಸ್ಕೃತಿಗಳನ್ನು ಬಿಂಬಿಸುವ ಅಂಶ ಇದರಲ್ಲಿ ಎದ್ದು ಕಾಣುತ್ತದೆ. ಹಿಂದಿನಾಟಕವೊಂದರ ಅನುವಾದ ವಾದ ಈ ನಾಟಕ ಕನ್ನಡ ಸಾಹಿತ್ಯಕ್ಕೆ ಕೊಟ್ಟಂತಹ ಕೊಡುಗೆಯಾಗಿದೆ. ೨೦೦೨-೦೩ನೇ ಸಾಲಿನ ಪದವಿ ತರಗತಿಗಳಿಗೆ ಪಠ್ಯವಾಗಿ ಈ ನಾಟಕವನ್ನು ಸೇರಿಸಲಾಗಿತ್ತು. ರಂಗಭೂಮಿ ಕಲಾವಿದರಿಂದ ಈ ನಾಟಕವು ಪ್ರದರ್ಶಿಸಲಾಗಿತ್ತು ಮತ್ತು ಯಶಸ್ವಿ ಪ್ರದರ್ಶನವಾಗಿತ್ತು.

ದೇಶ ವಿಭಜನೆಯಾದಂತಹ ಸಂದರ್ಭದಲ್ಲಿ ಹಿಂದೂಗಳೆಲ್ಲಾ ಭಾರತದಲ್ಲೂ, ಮುಸ್ಲಿಂರೆಲ್ಲಾ ಪಾಕಿಸ್ತಾನದಲ್ಲೂ ಇರಬೇಕೆಂಬ ನಿಯಮ ಜಾರಿಯಾಯಿತು. ಈ ನಿಯಮದ ನಂತರ ಪಾಕಿಸ್ತಾನದಲ್ಲಿ ಇಸ್ಲಾಂಜನರು ಹಿಂದೂಗಳನ್ನು ಮಕ್ಕಳು, ವೃದ್ಧರು ಎಂದೂ ನೋಡದೆ ಎಲ್ಲರನ್ನೂ ಹತ್ಯೆ ಮಾಡಿದರು ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರವೆಸಗಿ, ಕೊಲೆ ಮಾಡಿದರು. ನೂರಲ್ಲ ಸಾವಿರಾರು ಸಂಖ್ಯೆಯ ಹಿಂದುಗಳ ಹೆಣಗಳು ರಾಶಿ-ರಾಶಿಯಾಗಿ ಬಿದ್ದಿತು. ಭಾರತದಲ್ಲಿ ಇರುವಂತಹ ಎಷ್ಟೋ ಇಸ್ಲಾಂ ಧರ್ಮಿಯರನ್ನು ಹಿಂದೂಗಳು ನಾಶಗೊಳಿಸಿದರು. ಇದು ವಾಸ್ತವದ

ಸಂಗತಿ. ಇದರ ಉಲ್ಲೇಖವನ್ನು ಈ ನಾಟಕದಲ್ಲಿ ಕಾಣಬಹುದು. ಪೈಲ್ವಾನ್ ಮತ್ತು ಅವನ ಸಂಗಡಿಗರು ಲಾಹೋರ್‌ನಲ್ಲಿ ಇದ್ದಂತಹ ಹಿಂದೂಗಳನ್ನು ಕೊಂದಿದ್ದು ಮತ್ತು ಅದೃಷ್ಟವಶಾತ್ ರತನ್ ತಾಯಿ ಜೀವಂತ ಉಳಿದುಕೊಂಡಿದ್ದಳು.

ಸಿಕಂದರ್ ಮಿರ್ಜಾ ಕುಟುಂಬವನ್ನು ಲಖನೌದಿಂದ ಲಾಹೋರ್‌ಗೆ ಕಳುಹಿಸಿದ್ದರು. ಲಾಹೋರ್‌ಲ್ಲಿ ವಾಸಿಸಲು ಮನೆಯು ಸಿಗುವ ತನಕ ಆರು ತಿಂಗಳು ಕ್ಯಾಂಪ್‌ನಲ್ಲಿ ಇದ್ದು ಕೊಂಡು ಬಹಳ ಕಷ್ಟದ ದಿನಗಳನ್ನು ಎದುರಿಸಿದ್ದರು ಈ ಸನ್ನಿವೇಶವು ಬಹಳ ನೈಜವಾಗಿಯೇ ಬಂದಿದೆ ನಾಟಕದಲ್ಲಿ. ಹಿಂದೂಸ್ತಾನದಿಂದ ಅವರನ್ನು ಪಾಕಿಸ್ತಾನಕ್ಕೆ ಕಳುಹಿಸಿದಾಗ ಮನಸ್ಸಿಲ್ಲದ ಮನಸ್ಸಿನಲ್ಲಿಯೇ ಹೋಗುತ್ತಾರೆ. ಅಲ್ಲಿ ಹಿಂದೂ ಹೆಂಗಸೊಬ್ಬಳನ್ನು ಕಂಡು, ಆ ಹೆಂಗಸನ್ನು ಹಿಂದೂಸ್ತಾನಕ್ಕೆ ಓಡಿಸಬೇಕು ಎಂದು ಕೊಳ್ಳುವುದು ಬಹಳ ಸಹಜವೆಂದೇ ಅನ್ನಿಸುತ್ತದೆ. ತದನಂತರದಲ್ಲಿ 'ರತನ್‌ತಾಯಿಯನ್ನು ತಮ್ಮ ಕುಟುಂಬದ ಸದಸ್ಯರು ಮತ್ತು ಎಲ್ಲರಿಗೂ 'ಅಮ್ಮ' ಎಂದು ಕೊಳ್ಳುವುದು ಮನುಷತ್ವ ಧರ್ಮದ ಅತ್ಯಂತ ಉನ್ನತ ಶಿಖರವೆಂದೇ ಹೇಳಬಹುದು.

ಸ್ವಾತಂತ್ರ್ಯದೊರಕಿದ ತದನಂತರ ನಡೆಯುತ್ತಿದ್ದಂತಹ ಘಟನೆಗಳು. ಸನ್ನಿವೇಶಗಳನ್ನು ಮನದಲ್ಲಿಟ್ಟುಕೊಂಡರೆ, ಈ ಬದಲಾವಣೆ ಒಂದು ವಿಸ್ಮಯಕಾರಿಯಂತಿದೆ.

ಇಸ್ಲಾಂಧರ್ಮ ಅಂದರೆ ಎಲ್ಲರ ಮನಸ್ಸಿನಲ್ಲಿ ಮೂಡುವುದು ಸಾಮಾನ್ಯವಾಗಿ ಎರಡು ಪದಗಳು

**೧. ಇಸ್ಲಾಂ ಜನಾಂಗದಲ್ಲಿರುವ ಧರ್ಮಾಂಧತೆ**

**೨. ಜಿಹಾದ್ (ಧರ್ಮಯುದ್ಧ)**

ಆದರೆ, ಈ ನಾಟಕದಲ್ಲಿ ಮೌಲ್ವಿಯ ಪಾತ್ರದಿಂದ ನಿಜವಾದ ಇಸ್ಲಾಂ ಧರ್ಮ ಏನನ್ನು ಹೇಳುತ್ತದೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಎಂಬುದನ್ನು ತಿಳಿಯಬಹುದು. ನಾಟಕದಲ್ಲಿ, ಹಿಂದೂ, ಅಥವಾ ಇಸ್ಲಾಂಧರ್ಮವಾಗಲಿ ಅದಕ್ಕೆ ಅದರ್ದೇ ಆದಂತಹ ವಿಶೇಷತೆಗಳಿರುತ್ತದೆ. ಆದ್ದರಿಂದ ಯಾವುದೇ ಒಂದು ಧರ್ಮ ಶ್ರೇಷ್ಠ ಮತ್ತೊಂದು ಧರ್ಮ ಕೀಳು ಎಂಬ ಭಾವನೆಯನ್ನು ಹೋಗಲಾಡಿಸುತ್ತದೆ ಈ ನಾಟಕವು. ಜಗತ್ತಿನ ಯಾವುದೇ ಧರ್ಮವಾಗಲಿ ಅದು ಹೇಳುವುದು–ಅಹಿಂಸೆ, ದಯೆ, ತ್ಯಾಗ, ಪರೋಪಕಾರ, ಪರಸ್ಪರ ಪ್ರೀತಿ, ಗೌರವಕೊಡುವುದನ್ನು. ಇದೇ ತತ್ತ್ವವನ್ನು ಇಸ್ಲಾಂ ಧರ್ಮದಲ್ಲೂ ಇರುವುದನ್ನು ಈ ನಾಟಕದಲ್ಲಿ ಕಾಣಬಹುದು.

'ತನ್ನೊ' ಪಾತ್ರದ ಮುಖಾಂತರ ದೇಶವು ವಿಭಜನೆ ಯಾಕಾಯಿತು? ಹಿಂದೂ–ಮುಸ್ಲಿಂರೂ ಯಾಕೆ ಒಟ್ಟಿಗೆ ಇರಬಾರದೆಂಬ ಪ್ರಶ್ನೆಯನ್ನು ನಾಟಕಕಾರರು ಹೇಳಿಸಿರುವುದೇ ಸಮಾಜಕ್ಕೆ ಒಂದು ಸಂದೇಶವಾಗಿದೆ. ಈ ಪ್ರಶ್ನೆಯನ್ನು ನಾವೆಲ್ಲರೂ ಹಾಕಿಕೊಂಡಿದ್ದರೆ ಬಹುಶಃ ವಿಭಜನೆ, ಹಿಂಸೆಯನ್ನು ತಪ್ಪಿಸಬಹುದಿತ್ತೇನೋ.

ನಾಟಕದ ಮಹತ್ವದ ಸಂಗತಿ ಎಂದರೆ, ಹಿಂದೂ ಹೆಂಗಸೊಬ್ಬರ ಶವಸಂಸ್ಕಾರವನ್ನು ಪಾಕಿಸ್ತಾನದಲ್ಲಿ ಇಸ್ಲಾಂ ಧರ್ಮದವರು ಹಿಂದೂ ಸಂಪ್ರದಾಯದಂತೆ ಮಾಡುವುದು. ಹಿಂದೂ–ಮುಸ್ಲಿಂ ಭಾವೈಕ್ಯತೆಯ ಇತಿಹಾಸ ನಿರ್ಮಾಣ ಮಾಡಲು ನಾಂದಿ ಹಾಡುವಂತಿದೆ.

ಸಮಾಜದಲ್ಲಿ ಹೇಗೆ ಸತ್‌ನಡತೆಯ ಜನರಿರುತ್ತಾರೋ ಹಾಗೇ ದುರ್ಜನರು ಇರುತ್ತಾರೆ. ಇದಕ್ಕೆ ಉದಾಹರಣೆಯಾಗಿ ಪೈಲ್ವಾನ್ ಪಾತ್ರ. ಹಿಂದೂ ಧರ್ಮಕ್ಕೆ ಅನುಸಾರವಾಗಿ ನಡೆದುಕೊಂಡಂತಹ ಮೌಲ್ವಿಯನ್ನು ಹತ್ಯೆ ಮಾಡುತ್ತಾನೆ. ಇದರಿಂದಾಗಿ ವಾಸ್ತವದ ದರ್ಶನವಾಗುತ್ತದೆ.

**'ಸಮಾಜಕ್ಕೆ ಒಳಿತು ಮಾಡಲು ಒಬ್ಬರು-ಇಬ್ಬರಿಂದ ಸಾಧ್ಯವಿಲ್ಲ. ಇಡೀ ಸಮೂಹದ ಧ್ವನಿ ಏಕತೆಯಿಂದ ಕೂಡಿರಬೇಕು. ಇಲ್ಲವಾದರೆ, ಮತೀಯ ಘರ್ಷಣೆಗೆ ಬದಲಾಗಿ ಸಮಾಜದೊಳಗೆ ಸಂಘರ್ಷವೇರ್ಪಡುತ್ತದೆ ಎಂಬ ನಿಲುವನ್ನು ತಂದಿದ್ದಾರೆ'.**

ಈ ಎಲ್ಲಾ ಕಾರಣದಿಂದಾಗಿ ಈ ನಾಟಕವು ಸಾಹಿತ್ಯಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಎಂತಲೇ ಹೇಳಬಹುದು. ಸ್ವಾತಂತ್ರ್ಯದ ನಂತರದ ನಾಟಕ ಇದಾದರೂ, ಪ್ರಸ್ತುತದಲ್ಲೂ ಇದೇ ವಸ್ತುವಿನ ಬಗ್ಗೆ ಚರ್ಚೆ ನಡೆಯುತ್ತಲೇ ಇದೆ. ಸಾರ್ವಕಾಲಿಕ ಚರ್ಚೆಯ ವಿಷಯ ಇದಾಗಿದೆ.

'ಜತೆಗಿರುವನು ಚಂದಿರ' ನಾಟಕವೂ ಅನುವಾದಿತ ನಾಟಕವೇ, ಮೂಲದಲ್ಲಿ ಅಲ್ಪ ಸಂಖ್ಯಾತ ಕುಟುಂಬವೊಂದರ ಕಥಾನಕ. ಇದನ್ನು ಜಯಂತ್ ಕಾಯ್ಕಿಣಿಯವರು ಭಾರತದ ದೇಶದ ವಿಭಜನೆಯ ಸಂದರ್ಭಕ್ಕೆ ತಕ್ಕಂತೆ ಮಾರ್ಪಾಡನ್ನು ಮಾಡಿಕೊಂಡಿದ್ದಾರೆ. ದೇಶವಿಭಜನೆಯ ವೇಳೆಯಲ್ಲಿ ಉಂಟಾದ ಕೋಲಾಹಲವನ್ನು, ಒಂದು ಕುಟುಂಬ ಕೇಂದ್ರ ನೆಲೆಯನ್ನು ಇಟ್ಟುಕೊಂಡು ಹೇಳಲಾಗಿದೆ. ಕರಾವಳಿಯ ಒಂದು ಹಳ್ಳಿಯಲ್ಲಿ ನಡೆಯುವಂತಹ ಘಟನೆಯನ್ನು ಇಲ್ಲಿ ಹೇಳಿದೆಯಾರಾದರೂ ಇದು ಇಡೀ ದೇಶದಲ್ಲಿ ನಡೆಯುವಂತಹ ಸರ್ವೆ ಸಾಮಾನ್ಯಸಂಗತಿಯಾಗಿದೆ.

ನಾಟಕಕಾರರು ಈ ರೀತಿಯಾಗಿ ಹಳಿದ್ದಾರೆ – **"ಭೇದ ಉತ್ತರ ಭಾರತದಲ್ಲಾದರೂ ದಕ್ಷಿಣ ಕರಾವಳಿಯ ಹಳ್ಳಿಯ ಮೇಲಾಗುವ ಅದರ ಗಾಯ ಈ ನಾಟಕದ ವಸ್ತು. ಮೂಲದ ವಿನೋದ ಮತ್ತು ಕೌಟುಂಬಿಕತೆಯನ್ನು ಉಳಿಸಿಕೊಳ್ಳುವೆಡೆಯೇ ನನ್ನ ಪೂರ್ಣ ಲಕ್ಷ್ಯವಿದೆ."**[೧]

ಇವರ ಮಾತಿನಲ್ಲೇ ತಿಳಯಬಹುದು ನಾಟಕದ ಉದ್ದೇಶವೇ ಬೇರೆ ಅಂತ. ನಾಟಕದುದ್ದಕ್ಕೂ ಕೌಟುಂಬಿ ಕತೆ ಮತ್ತು ಹಾಸ್ಯದ ಹೊನಲು ಕಂಡುಬರುತ್ತದೆ.

ದಕ್ಷಿಣ ಕರಾವಳಿಯ ಹಳ್ಳಿಯಾದ್ದರಿಂದ ಉತ್ತರದಲ್ಲಿ ನಡೆಯುತ್ತಿರುವ ದಂಗೆಯ ಅರಿವೇ ಇಲ್ಲದಂತೆ ಮುಗ್ಧತೆಯಿಂದ ಕೂಡಿರುವ ಜನಗಳು. ಬಡತನದಲ್ಲೂ ನಲಿವು, ಹಾಸ್ಯದೊಂದಿಗೆ ಜೀವನ ನಡೆಸುವುದು, ಮಕ್ಕಳ ಮದುವೆ ಮಾಡುವುದೇ ಇದೇ ಅವರ ಜೀವನದ ಮೌಲ್ಯವಾಗಿತ್ತು. ರಂಜಾನ್ ಹಬ್ಬದ ಆಚರಣೆಯು ಧರ್ಮನಿಷ್ಠತೆಯನ್ನು ತೋರಿಸುತ್ತದೆ. ಹಳ್ಳಿಯ ಜನರಲ್ಲಿ **ಬದುಕಲು ಕಟ್ಟು**-ಪಾಡುಗಳನ್ನು ಹಾಕಿಕೊಳ್ಳುತ್ತಾರೆ. ಅದನ್ನು ಪರಂಪರೆ ಎಂದು ಇಲ್ಲಿ ಕರೆದಿದ್ದಾರೆ. ಉಡುಗೆ-**ತೊಡುಗೆ,** ಹಬ್ಬದ ಆಚರಣೆ, ಅಡುಗೆ ಮಾಡುವ ಎಲ್ಲಾ ವಿಷಯಕ್ಕೆ

---

**೧: ಜಯಂತ ಕಾಯ್ಕಿಣಿ (ಲೇಖಕರ ಮಾತು)**

ಪರಂಪರೆಯನ್ನು ಅನುಸರಿಸುತ್ತಿದ್ದೇವೆಂದು ಕೊಳ್ಳುತ್ತಿದ್ದಾರೆ. ಆದರೆ, ಆ ಪರಂಪರೆಯೇ ಇವರನ್ನು ನಿಯಂತ್ರಿಸುತ್ತಿದೆ ಎಂಬುದು ಅವರಿಗೆ ಗೋಚರವೇ ಆಗುವುದಿಲ್ಲ.

ನಾಟಕಕಾರರು, ನಾಟಕದಲ್ಲಿ ಹಾಡುಗಳನ್ನು ಮತ್ತು ಅನೇಕ ತಂತ್ರಗಳನ್ನು ಬಳಸಿಕೊಂಡಿದ್ದಾರೆ ಸ್ವಲ್ಪ ನವ್ಯ ಪಂಥಕ್ಕೆ ಸೇರಿದ ನಾಟಕ ಇದಾದ್ದರಿಂದ ಓದುಗರಿಗೆ ಸುಲಭವಾಗಿ ಹಿಡಿತಕ್ಕೆ ಸಿಲುಕುವುದಿಲ್ಲ. ಆದರೂ ನಾಟಕದಲ್ಲಿ ಅತ್ಯಂತ ಅದ್ಭುತ ಬದಲಾವಣೆಯನ್ನು ತಂದಿದ್ದಾರೆ. ದೇಶವಿಭಜನೆಯ ಸಂದರ್ಭ ಅಂದರೆ ೧೯೪೭ ಅಥವಾ ೧೯೪೮ರ ಸಂದರ್ಭ ಎಂದು ಇಟ್ಟುಕೊಂಡರೂ ಆ ಸಂದರ್ಭದಲ್ಲಿ ಕ್ರಾಂತಿಯ ಕಹಳೆಯನ್ನು ಊದಿದ್ದಾರೆ.

ಶಕೂರ್ ಮಾಸ್ತರನ ಆಗಮನದಿಂದಾಗಿ ಜನರ ಮನಸ್ಸಿನಲ್ಲಿದ್ದಂತಹ ಪರಂಪರೆಯ ಒಂದು ಭಾಗ ಒಡೆದು ಹೊರಬಂದರು ಮತ್ತು ಶಬ್ನಂ ಪಾತ್ರದ ದಿಕ್ಕನೇ ಬದಲಾಯಿಸಿತು. ಇಸ್ಲಾಂ ಧರ್ಮದಲ್ಲಿ ಎಷ್ಟೋ ಹೆಣ್ಣು ಮಕ್ಕಳು ಈಗಲೂ ಹೊರಗೆ ಹೋಗುವಾಗ ಬೂರ್ಖಾವನ್ನು ಧರಿಸುವ ಪದ್ಧತಿ ಇದೆ. ಆದರೆ, ಸ್ವಾತಂತ್ರ್ಯದ ಪೂರ್ವದಲ್ಲಿ ಇಸ್ಲಾಂ ಹೆಣ್ಣು ಮಕ್ಕಳಿಗೆ ಶಿಕ್ಷಣವನ್ನುಕೊಡಿಸುವ ಮುಖಾಂತರ ಹೊಸದೊಂದು ಆಯಾಮವನ್ನು ಸೃಷ್ಟಿ ಮಾಡಿದ್ದಾರೆ. ಮುಂದುವರೆದು ಬಡೇಮಿಯಾ ಹೆಣ್ಣು ಮಗಳಾದ ಆರ್ಷಿಯಾ ಪ್ರೀತಿಸಿದ ಶಫಿ ಜೊತೆ ವಿವಾಹ ನೆರವೇರಿಸುವುದು ನಾಟಕಕಾರರ ಕಲ್ಪನಾ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿ ಮತ್ತು ಹೊಸದೊಂದು ಕ್ರಾಂತಿಯನ್ನು ಈ ನಾಟಕದ ಮುಖಾಂತರ ಮಾಡಿಸಿದ್ದಾರೆ.

ಶಕೂರ್ ಮಾಸ್ತರನಿಂದ ದೇಶಪ್ರೇಮಿಯು ಒಬ್ಬ ಇಸ್ಲಾಂ ಧರ್ಮಿ ಕೂಡ ಆಗಬಹುದೆಂದು ತಿಳಿಸಿದ್ದಾರೆ. ಅವನ ಸಮಯ ಪ್ರಜ್ಞೆ, ವಿಚಾರವಂತಿಕೆಗೆ ಮಾರು ಹೋದ ಶಬ್ನಂ, ಅವನನ್ನೇ ಅನುಸರಿಸಿ ಮನೆ ಬಿಟ್ಟು ಹೊರಡುತ್ತಾಳೆ. ಪರಂಪರೆಯ ಇನ್ನೊಂದು ಭಾಗವನ್ನು ಶಬ್ನಂ ಒಡೆದು ಮುಂದೆ ಸಾಗುತ್ತಳೆ. ಶಕೂರ್ ಮಾಸ್ತರ್‌ನಿಂದ ದೇಶವು ವಿಭಜನೆ ಹೊಂದಲು ಸ್ವಾರ್ಥ ಜನರ ಕೈವಾಡವಿರುವುದನ್ನು ತಿಳಿಯಬಹುದು. ಇದು ಇಂದಿಗೂ ಪ್ರಸ್ತುತದ ವಿಷಯವಾಗಿದೆ. ಇಂದೂ ದೇಶದಲ್ಲಿ ನಡೆಯುವಂತಹ ಸಮಾಜ ಘಾತುಕ ಚಟುಟಿಕೆಯ ಹಿಂದೇ ಯಾರದ್ದೋ ಸ್ವಾರ್ಥವು ಅಡಗಿರವುದನ್ನು ಕಾಣಬಹುದಾಗಿದೆ. ಆದ್ದರಿಂದ ಪ್ರಸ್ತುತ ಸಮಾಜಕ್ಕೂ ಅನ್ವಯಿಸುವಂತಹ ವಿಷಯ ಇದಾಗಿದೆ.

ನಾಟಕದ ಆರಂಭದಲ್ಲಿ ಇದ್ದಂತಹ ಪರಂಪರೆಯನ್ನು ಮುಂದೆ ಒಂದೊಂದಾಗಿ ಕೆಡವಿ ಹೊಸ ಆಯಾಮ ಸೃಷ್ಟಿಮಾಡಿದರೂ, ನಾಟಕದ ಅಂತ್ಯದಲ್ಲಿ ಪರಂಪರೆಯೇ ಮೇಲಾಗುತ್ತದೆ. 'ಸೈರಾ' ಹಿಂದೂ ಹುಡುಗನನ್ನು ಮದುವೆಯಾಗುವುದನ್ನು ಪರಂಪರೆ ನಿಷೇಧಿಸುತ್ತದೆ. ಆದರೆ, ಇದೇ ಕೆಲಸವನ್ನು ಸೈರಾ ಮಾಡಿದ್ದರಿಂದ ತನ್ನ ಸಂಬಂಧಿಕರನ್ನೆಲ್ಲಾ ಕಳೆದು ಕೊಂಡಳು. ಆದರೆ, 'ಸೈರಾ' ಪಾತ್ರದ ದೃಷ್ಟಿಯಿಂದ ಗೆಲ್ಲುತ್ತಾಳೆ. ನಾಟಕಕಾರರ ಆಶಯವೂ ಇದೇ ಆಗಿದೆ. 'ಸೈರಾ' ಹಿಂದೂ ಸಂಪ್ರದಾಯದಂತೆ ಮದುವೆಯಾಗಿ 'ಮಂಗಳಸೂತ್ರ'ವನ್ನು ಹಾಕಿಕೊಳ್ಳುವುದು ಸರ್ವಧರ್ಮ ಸಮನ್ವಯವನ್ನು ಸಾರುತ್ತದೆ.

ಹಿಂದೂ-ಮುಸ್ಲಿಂ ನಡುವಿನ ಅಂತರವನ್ನು ಕಡಿಮೆಮಾಡಲು ನಾಟಕಕಾರರು ಈ ಸೂತ್ರವನ್ನು ಬಳಸಿದ್ದಾರೆ. 'ಪ್ರೀತಿ'ಯಿಂದಾಗಿ ಈ ಎರಡು ಜಾತಿಯನ್ನು ಒಂದಾಗಿಸಬಹುದೆಂದು ತಿಳಿಸಿದ್ದಾರೆ. ಈ ಸೂತ್ರವನ್ನು ಇಂದಿನ ಎಷ್ಟೋ ವಿದ್ಯಾಂವತರೇ ಒಪ್ಪುವುದಿಲ್ಲ. ಹಾಗಿರುವ ಪಕ್ಷದಲ್ಲಿ ಅಂದಿನ ಸಮಾಜ ಇದನ್ನು ತಿರಸ್ಕರಿಸುವುದು ಸಹಜವಾಗಿಯೇ ಇದೆ. ಭಾರತದ ಉತ್ತರಭಾಗದಲ್ಲಿ ವಿಭಜನೆಗಾಗಿ ನಡೆಯುತ್ತಿದ್ದಂತಹ ದಂಗೆಯ ಕಾವು ಈ ಕರಾವಳಿ ಹಳ್ಳಿಯಮೇಲೂ ಆಯಿತು. ಹಿಂದೂ-ಮುಸ್ಲಿಂರ ವಿವಾಹ ಆ ಹಳ್ಳಿಯಲ್ಲಿ ಗಲಭೆಗೆ ಕಾರಣವಾಯಿತು. ಸೈರಾಳ ಕುಟುಂಬವೂ ಸೇರಿದಂತೆ ಎಷ್ಟೋ ಮುಸ್ಲಿಂ ಪರಿವಾರವು ಊರನ್ನು ಬಿಡುವ ಸ್ಥಿತಿಗೆ ಬಂದಿತು.

ಸಮಾಜದಲ್ಲಿ ಏನಾದರೂ ಒಳ್ಳೆಯ ಕಾರ್ಯ ನಡೆದರೆ ಅದಕ್ಕೆ ಪ್ರತಿಕ್ರಿಯೆ ಎಂಬಂತೆ ವಿರೋಧವೇ ವ್ಯಕ್ತವಾಗುತ್ತದೆ. ಇದು ಇಂದಿಗೂ ನಡೆಯುವಂತಹ ಕ್ರಿಯೆ. ಪರಂಪರೆಯಿಂದ ಹೊರಬರಲಾರದಂತಹ ಕುಟುಂಬವು ಊರನ್ನು ಬಿಟ್ಟು ಹೊರಡುತ್ತದೆ. ಆದರೂ ಮಗಳನ್ನು ಮಾತ್ರ ಸ್ವೀಕರಿಸುವುದಿಲ್ಲ.

ನಾವೂ ಮಾಡಿಕೊಡಂತಹ ಆಚಾರ-ವಿಚಾರ ನಂಬಿಕೆಗಳು ಹೇಗೆ ನಮ್ಮನ್ನು ನಿಯಂತ್ರಿಸುತ್ತಿದೆ ಎಂಬುದನ್ನು ತಿಳಿಸುತ್ತದೆ. ಇದರಿಂದ ಹೊರಬರಲಾಗದ ಈ ನಾಟಕವು ಈ ಒಂದು ದೃಷ್ಟಿಯಿಂದ ಸೋಲುತ್ತದೆ ಎಂದು ಹೇಳಬಹುದು.

ನಾಟಕದ ಅಂತ್ಯವು ಗೊಂದಲಮಯವಾಗಿದೆ. ಮನೆ ಖಾಲಿ ಮಾಡಿದಂತಹ ಬಡೇಮಿಯಾ ಕುಟುಂಬ ಹೊರಡುವ ಸಂದರ್ಭದಲ್ಲಿ ಮುನೀರ್‌ಜಾನ್ ಕಸಹೊಡೆಯುತ್ತ ನಿಲ್ಲುತ್ತಾಳೆ. ಇದು ಇಸ್ಲಾಂಧರ್ಮದ ವಿರುದ್ಧವಾದಂತಹ ಕ್ರಿಯೆ. ಹಿಂದೂ ಧರ್ಮವೂ ಈ ವಿರೋಧವನ್ನು ಹೇಳುತ್ತದೆ. ಮುನೀರ್‌ಜಾನ್ ಮನೆ ಖಾಲಿ ಮಾಡಿದ ಮೇಲೆ ಕಸ ಗುಡಿಸುವುದನ್ನು **'ಪರಂಪರೆ ಹೆಸರಲ್ಲಿ ಆಚರಣೆಗೆ ಬಂದಿರುವ ಮೂಢನಂಬಿಕೆಗಳನ್ನು ಗುಡಿಸಿ ಎಸೆಯುವುದು'** ಇದು ಅವರನ್ನು ಬದುಕಿನತ್ತ ಮುಖಮಾಡುವ ನಿಲುವು ಎಂದು ಕೊಂಡರೆ 'ಸೈರಾ'ಳ ವಿವಾಹವನ್ನು ಏಕೆ ಸ್ವೀಕರಿಸಲಿಲ್ಲ ಎಂಬ ಪ್ರಶ್ನೆಯು ಮೂಡುತ್ತದೆ. ಈ ಎಲ್ಲಾ ಪ್ರಶ್ನೆಗಳಿಗೆ ಉತ್ತರ ಹುಡುಕುವುದು ಓದುಗರಿಗೆ ಕಷ್ಟವಾಗುತ್ತದೆ.

ನಾಟಕದಲ್ಲಿರುವ ವಸ್ತುವನ್ನು ಮತ್ತು ಪ್ರಸ್ತುತ ಸನ್ನಿವೇಶವನ್ನೆಲ್ಲಾ ತುಲನೆ ಮಾಡಿದರೆ ಎಷ್ಟೋ ಸಾಮ್ಯತೆ ಕಂಡು ಬರುತ್ತದೆ. ಕ್ರಾಂತಿಯನ್ನು ಮಾಡಿ ಹೊಸ ಬೆಳೆಯನ್ನು ಬಿತ್ತಿದ್ದಾರೆ. ಆದರೆ, ಈ ಒಂದು ವಿಷಯದಿಂದಾಗಿ ಈ ನಾಟಕವೂ ಎಲ್ಲೋ ಒಂದು ಕಡೆ ಸಮಾಜಕ್ಕೆ ಸಾಹಿತ್ಯದ ಮುಖಾಂತರ ಹೇಳಲು ಹೊರಟಿರುವ ಸಂದೇಶವು ಸೋಲುತ್ತಿದೆ ಅಂತ ಅನ್ನಿಸುತ್ತದೆ.

'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ಸಾಹಿತ್ಯ ಕ್ಷೇತ್ರದಲ್ಲಿ ಬಹಳ ಮಹತ್ವವನ್ನು ಪಡೆದಿದೆ. ಸ್ವಾತಂತ್ರೋತ್ತರದ ನಾಟಕವಾದ ಇದು ಸ್ವತಂತ್ರ ಕೃತಿ. ೨೦೦೧ರಲ್ಲೇ ಮೊದಲಬಾರಿಗೆ ಈ ನಾಟಕವನ್ನು ರಂಗದ ಮೇಲೆ ತಂದಿದ್ದರು. ಪ್ರಸಕ್ತಸಾಲಿನ ಪದವಿ ತರಗತಿಗೆ ಪಠ್ಯವೂ ಆಗಿದೆ ಈ ನಾಟಕ. ಸ್ವಾತಂತ್ರ್ಯ ಬಂದು ಐವತ್ತು ನಾಲ್ಕು ವರ್ಷಗಳ

ನಂತರದ ನಾಟಕ ಇದಾಗಿದೆ. ಶೈಕ್ಷಣಿಕ ದೃಷ್ಟಿಯಿಂದ ವಿಜ್ಞಾನದ ದೃಷ್ಟಿಯಿಂದ, ಆರ್ಥಿಕ ದೃಷ್ಟಿಯಿಂದ ಎಲ್ಲದರಿಂದಲೂ ದೇಶವು ಅಭಿವೃದ್ಧಿಯತ್ತ ಮುಖಮಾಡಿದೆ. ಹೀಗಿದ್ದರೂ ಭಾರತೀಯರ ಮನಸ್ಸು ನಿಂತಿರುವುದು ಜಾತಿ, ಧರ್ಮದ ಮೇಲೆ ಹಿಂದೂ-ಮುಸ್ಲಿಂ ಎಂಬ ಅನಾದಿ ಕಾಲದ ಪಿಡುಗನ್ನು ಮುಂದುವರೆಸಿಕೊಂಡೇ ಬಂದಿದೆ.

ವಿದ್ಯಾವಂತರ ಸಮಾಜದಲ್ಲೇ ಉದ್ಭವಿಸುವುದು ಈ ಕೋಮುವಾದ. ನಮ್ಮ ದೇಶದಲ್ಲಿ ಬರೀ ಕೋಮುವಾದವೊಂದೇ ಇಲ್ಲ, ಹೆಚ್ಚಾಗಿ ಕೋಮು ಸೌಹಾರ್ದತೆಯೂ ಕಂಡು ಬರುತ್ತದೆ. ಮೊಹರಂ, ಉರುಸ್ ಆಚರಣೆಗಳಲ್ಲಿ ಹಿಂದೂಗಳು ಭಾಗವಹಿಸುತ್ತಾರೆ. ಹಿಂದೂ ಹಬ್ಬಗಳಾದ, ದೀಪಾವಳಿ, ಗಣೇಶನ ಉತ್ಸವದಲ್ಲಿ ಇಸ್ಲಾಂಧರ್ಮದವರೂ ಭಾಗವಹಿಸುತ್ತಾರೆ. ಇದೆಲ್ಲವೂ ಸೌಹಾರ್ದತೆಯನ್ನು ತೋರಿಸುತ್ತದೆ. ಹಾಗೆಯೇ ಕೋಮುವಾದವು ಇನ್ನೂ ಹೆಚ್ಚಿನ ಮಟ್ಟದಲ್ಲಿ ದೇಶದಲ್ಲಿದೆ. ಕೋಮುವಾದ ಎಂಬುದನ್ನು ಕಿತ್ತಿಹಾಕಿ 'ಮನುಜಮತ', ವಿಶ್ವಪಥ'ದ ತತ್ತ್ವವನ್ನು ಸಾಧಿಸಲು ನಾಟಕಕಾರು ಪ್ರಯತ್ನಪಟ್ಟಿದ್ದಾರೆ.

**"ಇಸ್ಲಾಂಧರ್ಮೀಯರಾದ ಬಡೇಸಾಬ ಮುಂದೆ ರಾಮದಾಸರಾಗಿ ಪರಿವರ್ತನೆಹೊಂದಿ ಹರಿದಾಸ ಪರಂಪರೆಗೆ ಅತ್ಯಂತ ಮಹತ್ವದ ಕೀರ್ತನೆಗಳನ್ನು ಕೊಟ್ಟಿದ್ದಾರೆ. ಇವರ ಬದುಕು ಕೋಮು ಸೌಹಾರ್ದತೆಗೆ ಉಜ್ವಲ ನಿದರ್ಶನವಾಗಿದೆ"**[೧]

ಇದೇ ರೀತಿಯ ನಿದರ್ಶನವನ್ನು ಈ ನಾಟಕದಲ್ಲಿ ಕಾಣಬಹುದು. ಅನ್ವರ್‌ನನ್ನು ಹಿಂದೂ ಕುಟುಂಬದವರು ಮನೆಯ ಮಗನಾಗಿ ಮನೆಯಲ್ಲೇ ಇರಲಿ ಎಂದು ಹೇಳಿ ಅವನನ್ನು ಒಪ್ಪಿಕೊಳ್ಳುವುದು ಬಹಳ ದೊಡ್ಡ ಸಂಗತಿಯೇ ಹೌದು. ಆ ಮನೆಯ ಮಗ ಎಂದು ಅನ್ವರ್‌ನಿಗೆ ಒಪ್ಪಿಕೊಳ್ಳಲು ಕಷ್ಟವಾಗುತ್ತದೆ. ಇನ್ನೂ ಸಮಾಜದ ಆ ರೀತಿಯಲ್ಲಿ ಪರಿವರ್ತನೆ ಹೊಂದಬೇಕು. ನಮ್ಮ ದೇಶವು ಭಾವೈಕ್ಯತೆ, ಸರ್ವಧರ್ಮ ಸಮನ್ವಯದಿಂದ ಕೂಡಿದ ದೇಶವಾಗಬೇಕೆಂಬ ಆಸೆಯನ್ನು ನಾಟಕಕಾರರು ಈ ನಾಟಕದ ಮುಖಾಂತರ ತಿಳಿಸುತ್ತಾರೆ.

ಈ ರೀತಿ ಸಮಾಜಬದಲಾವಣೆಯಾಗಬೇಕಾದರೆ, ಯುವಜನರು ಹೋರಾಡಬೇಕು ಮತ್ತೆ ಅವರ ಮನಃಪರಿವರ್ತನೆಗೊಳ್ಳಬೇಕು. ಈ ಕಾರಣದಿಂದಲೇ ಬಹುಶಃ ಪದವಿ ತರಗತಿಗೆ ಪಠ್ಯವಾಗಿ ಇಡಲಾಗಿದೆ.

ಹಿಂದೂ-ಮುಸ್ಲಿಂರ ಮಧ್ಯ ಮಾತ್ರ ಕೋಮುವಾದವಿಲ್ಲ, ಹಿಂದೂ ಧರ್ಮದ ಒಳಗೂ ಅಸಂಖ್ಯಾತ ಸಂಘರ್ಷವು ಇರುತ್ತದೆ ಎಂಬುದಕ್ಕೆ ಶ್ಯಾಮಭಟ್ಟ ಮತ್ತು ಮಹಾಬಲನ ಪಾತ್ರದಿಂದ ತಿಳಿಸಿದ್ದಾರೆ. ಸಾಮಾಜಿಕ ಕಳಕಳಿವುಳ್ಳ ಹಿರಿಯ ಜೀವಿ ಶ್ಯಾಮಭಟ್ ಸಮಾಜದಲ್ಲಿ ಸಮಾನತೆ ತರಲು ಹಿಂಸೆಯೊಂದೇ ಮಾರ್ಗ ಎಂದು ಕೊಂಡಿರುವ ಮಹಾಬಲ ಇವರಿಬ್ಬರ ಮಧ್ಯೆಯೇ ಸಂಘರ್ಷವೇರ್ಪಡುತ್ತದೆ.

ಭಾವನಾತ್ಮಕ ಕುಟುಂಬವನ್ನು ತಂದರೂ, ನಾಟಕವು ಕುಟುಂಬಕ್ಕೆ ಮಾತ್ರ ಸೀಮಿತವಾಗದೆ ಹೆಚ್ಚು ವಿಸ್ತಾರವಾಗಿ ಬೆಳೆಸಿದ್ದಾರೆ. ಸಮಾಜಕ್ಕೆ ನ್ಯಾಯದೊರಕಿಸಿಕೊಡಬೇಕೆಂದು ಅನ್ಯಾಯ ಮಾರ್ಗವನ್ನು ಹಿಡಿದವನು ಮಹಾಬಲ. ಪ್ರಜ್ಞಾವಂತ ನಾಗರಿಕರು ಸಮಾಜದಲ್ಲಿ ಮುಂದೊಂದು ದಿನ ಹುಟ್ಟಿಕೊಳ್ಳುತ್ತಾರೆಂಬ ಆಶಾದಾಯಾಕ

---

**೧: ಕನ್ನಡ ಸಾಹಿತ್ಯ: ಕೋಮುಸೌಹಾರ್ದತೆ (ಪುಟ-೧೫)**

ನಿಲುವು ಶ್ಯಾಮಭಟ್ಟರದ್ದು. ಹಿಂದೂ ಧರ್ಮದಲ್ಲೇ ಇರುವ ಎರಡು ವೈರುದ್ಧ್ಯವನ್ನು ತಿಳಿಸಿದ್ದಾರೆ. ಅನಂತನ ಪಾತ್ರ ನಾಟಕಕಾರರ ಉದ್ದೇಶಕ್ಕೆ ಬಳಕೆಯಾಗಿದೆ. ಇವನ ಪಾತ್ರವನ್ನು ಅರ್ಥಮಾಡಿಕೊಳ್ಳುವುದು ಸ್ವಲ್ಪ ಕಷ್ಟಸಾಧ್ಯವಾಗಿದೆ. ಅನಂತನ ಜಾಗಕ್ಕೆ ಅನ್ವರ್‌ನನ್ನು ಕಳಿಸಿದ್ದು ಮತ್ತು ಮನೆಯವರೆಲ್ಲರೂ ಅವನನ್ನು ಒಪ್ಪಿಕೊಳ್ಳುವುದು. ಇದೆಲ್ಲಾ ನಾಟಕಕಾರರ ಆಶಯವೆನ್ನಬಹುದು. ನಾಟಕವು ವಿಭಿನ್ನ ಆಯಾಮಗಳಿಂದ ಕೂಡಿದ್ದು, ಓದುಗರಿಗೆ ಸರಳವಾಗಿ ಗ್ರಹಿಸಲು ಸಾಧ್ಯವಿಲ್ಲ. ಮತ್ತು ಓದುವುದಕ್ಕೆ ಸರಳವೂ ಆಗಿಲ್ಲ. ಆದರೆ, ಅದರಿಂದ ಸಮಾಜಕ್ಕೆ ದೊರೆತಂತಹ ಸಂದೇಶ ಅತಿದೊಡ್ಡದು. ಆದ್ದರಿಂದ ಈ ನಾಟಕವು ಹೆಚ್ಚು ಮಹತ್ವದಿಂದ ಕೂಡಿದೆ. ತುಂಬಾ ಗಂಭೀರವಾದಂತಹ ವಿಷಯವನ್ನೇ ಹೇಳಿಕೊಂಡು ಹೋಗುವುದರಿಂದ ಮಧ್ಯದಲ್ಲಿ ಅನ್ವರ್ ಮತ್ತು ಕುಟ್ಟಿಯ ನಡುವೆ ಹಾಸ್ಯದ ಮಾತುಕತೆಯೂ ನಡೆಯುತ್ತದೆ. ಸ್ಥಳೀಯಭಾಷೆಯ ಸೊಗಡಾದ ಹವ್ಯಕ ಭಾಷೆಯನ್ನು ಒಂದು ಇಡೀ ದೃಶ್ಯದಲ್ಲಿ ತಂದಿದ್ದಾರೆ. ಇದು ಓದಲು ಸ್ವಲ್ಪ ಕಷ್ಟವಾದರೂ ಸೊಗಸಾದ ಭಾಷೆ. ಜನರನ್ನು ಓದುವುದಕ್ಕೆ ಆಕರ್ಷಿಸುತ್ತದೆ.

ನಾಟಕದ ಶೀರ್ಷಿಕೆಯನ್ನು ಓದಿದಾಗ ಯಾರಿಗೇ ಆದರೂ ಅರ್ಥವಾಗಲು ಕಷ್ಟವಾಗುತ್ತದೆ. ಅದಕ್ಕಾಗಿ ಆ ಊರಿಗೆ ಏಕೆ ಹಾಗೆ ಹೆಸರು ಬಂದಿತು ಎಂಬುದನ್ನು ಮೊದಲ ದೃಶ್ಯದಲ್ಲೇ ಜನರಿಗೆ ತಿಳಿಸುತ್ತಾರೆ.

ಅನ್ವರ್-ಮಹಾಬಲ ಸಂಭಾಷೆಯಲ್ಲಿ, ಮಹಾಬಲನು ತನ್ನ ಅಸ್ತಿತ್ವ ಹೇಗೆ ರೂಪುಗೊಂಡಿದೆ ಎಂಬುದಕ್ಕೆ ಉದಾಹರಣೆಯಾಗಿ ರವೀಂದ್ರನಾಥ್ ಠಾಗೂರ್ ಅದರ 'ಗೋರಾ' ಕಾದಂಬರಿಯಲ್ಲಿನ 'ಗೋರಾ'ಪಾತ್ರವನ್ನು ಹೇಳುತ್ತಾನೆ. ವಿದ್ಯಾವಂತರಾದ ಯುವಕರು ಸಾಹಿತ್ಯದಿಂದ ಪ್ರೇರಣೆ ಪಡೆದು ಸತ್‌ಮಾರ್ಗದಲ್ಲಿ ನಡೆಯುವ ಬದಲು ಅದಕ್ಕೆ ವಿರುದ್ಧವಾಗಿ ನಡೆಯುವುದು ವಿಪರ್ಯಾಸವೇ ಸರಿ.

ಅನಂತ ಮತ್ತು ಅನ್ವರ್‌ನ ಸಂಭಾಷಣೆಯಲ್ಲಿ, ಅನಂತ ವರ್ಚುವಲ್ ರಿಯಾಲಿಟಿ ಬಗ್ಗೆ ಮಾತಾಡುತ್ತಾನೆ. ಕಂಪ್ಯೂಟರ್ ಪರಿಭಾಷೆಯನ್ನು ಬಳಸುತ್ತಾನೆ. ಆಧುನಿಕ ಯುಗದ ವಿದ್ಯಾವಂತನಾದ ಅನಂತನ ಮುಖಾಂತರ ಸಮಾಜದ ದಿಶೆಯನ್ನು ಬದಲಾಯಿಸುವ ನಿಟ್ಟಿನಲ್ಲಿ ನಾಟಕಕಾರರು ಸಾಗಿದ್ದಾರೆ.

ಅನಂತನು ತಂದೆಗೆ ಬರೆದಂತಹ ಪತ್ರದಲ್ಲಿ ತನ್ನ ಅಸ್ತಿತ್ವದ ಬಗ್ಗೆ ಕುರಿತು ಬರೆದಿದ್ದಾನೆ.

**"ಭಾರತದಲ್ಲಿ ಬದುಕುವ ಪ್ರತಿಯೊಬ್ಬ ಹುಡುಗನೂ ನಿಜವಾಗಿ ಒಬ್ಬ ವಯಸ್ಕ ಮನುಷ್ಯ ಆಗೋದು ಅವರ ಅಪ್ಪ ಸತ್ತ ಮೇಲೆಯೇ ಅಂತ"**[೧] ಎಂದು ಸೈಕಾಲಜಿಸ್ಟ್ ಹೇಳಿದ್ದಾರೆ ಎಂದು ಉಲ್ಲೇಖಿಸಿದ್ದಾನೆ.

ಇದು ಅನಂತನ ಜೀವನದಲ್ಲಿ ಅಕ್ಷರಸಹ ನಿಜವಾಗಿರುತ್ತದೆ. ಒಬ್ಬ ವ್ಯಕ್ತಿಯನ್ನು ಸ್ವತಂತ್ರಗೊಳಿಸಿದರೆ ಅವನ ಮನಸ್ಸು ಎಷ್ಟೋ ಮುಕ್ತವಾಗಿ ಆಲೋಚಿಸಬಲ್ಲುದು ಎಂಬುದಕ್ಕೆ ಅನಂತನ ಪಾತ್ರ ಉದಾಹರಣೆಯಾಗಿ ಬಂದಿದೆ.

---

**೧: ಚೂರಿ ಕಟ್ಟೆ (ಪುಟ-೩೮)**

ಅನ್ವರ್‌ನನ್ನು ಪ್ರೀತಿಸಿದಕ್ಕಾಗಿಯೇ 'ಪ್ರೀತಿ' ಪ್ರಾಣ ಕಳೆದುಕೊಂಡಳು 'ಪ್ರೀತಿ' ಯನ್ನು ಪ್ರೀತಿಸಿದಕ್ಕಾಗಿಯೇ ಅನ್ವರ್-ಅನಂತನಾಗಿ ರೂಪಾಂತರಗೊಂಡ. ಇವರಿಬ್ಬರ ಪ್ರೀತಿಯು ಸಮಾಜಕ್ಕೆ ಸ್ವೀಕೃತವಾಗಿರುವುದಿಲ್ಲ. ಈ ವಿಡಂಬನೆಯನ್ನು ನಾಟಕಕಾರರು ತಂದಿದ್ದಾರೆ. ಯಾವ ಸಮಾಜವು ಅವರನ್ನು ತಿರಸ್ಕರಿಸಿತೋ ಅದೇ ಸಮಾಜದ ಪ್ರಜ್ಞಾವಂತ ವ್ಯಕ್ತಿ ಅನ್ವರ್‌ನನ್ನು ಮಗ ಎಂದು ಸ್ವೀಕರಿಸುತ್ತಾನೆ. - "ಈ ಪ್ರಪಂಚದ ಎಲ್ಲಾ ಸಂಬಂಧಗಳೂ ನಿಂತಿರುವುದು ನಂಬಿಕೆಯ ಮೇಲೆ ಹೊರತು ಸತ್ಯದಮೇಲಲ್ಲ" ಎಂದು ಅನಂತ ಹೇಳುತ್ತಾನೆ. ಈ ತತ್ತ್ವವೇ ಇಡೀ ನಾಟಕದ ಮುಖಾಂತರ ಪ್ರತಿಪಾದಿಸಲು ಹೊರಟಿರುವುದು.

**"ಒಬ್ಬ ಮುಸಲ್ಮಾನನಿಗೆ "ಓಂ ನಮೋ ಭಗವತೇ ವಾಸುದೇವಾಯ" ಎಂದು ಹೇಳಲೂ ಕಷ್ಟವಾಗಬಹುದು ಕ್ರೈಸ್ತ ಮತದವನಿಗೆ "ಓಂ ನಮಃ ಶಿವಾಯ" ಎಂದು ಹೇಳಲು ಸೋಜಿಗವಾಗಬಹುದು, ಅಂತವರು ನಮ್ಮ ಅಜ್ಜ, ಅಜ್ಜಿಯವರೆಲ್ಲರೂ ಹಿಂದೆ ಈ ರೀತಿ ಹೇಳಿಕೊಳ್ಳುತ್ತಿದ್ದರು ಎಂಬ ಕಲ್ಪನೆ ಬಂದರೆ, "ನಾನು ಹಿಂದು, ನಾನು ಕ್ರೈಸ್ತ ಮತದವ, ನಾನು ಸಿಖ್‌ಮತದವ, ನಾನು ಮುಸಲ್ಮಾನ" ಎಂಬದೆಲ್ಲವೂ ತಾನಾಗಿಯೇ ಹಾರಿಹೋಗಿ ಬಿಡುತ್ತದೆ"**[೧]

ಎಂಬ ನಿಲುವನ್ನೇ ಈ ನಾಟಕದಲ್ಲಿ ಕಾಣಬಹುದು. ಜಾತಿ-ಮತ-ಧರ್ಮವನ್ನು ಬಿಟ್ಟು ಮನುಷತ್ವ ಧರ್ಮಕ್ಕೆ ನಾವು ಬಾಗಬೇಕು. ಪ್ರಪಂಚದಲ್ಲಿರುವುದು ಎರಡೇ ಜಾತಿ- ಒಂದು ಗಂಡು, ಇನ್ನೊಂದು ಹೆಣ್ಣು, ಉಳಿದಿದ್ದೆಲ್ಲಾ ಆಚಾರದ ಹೆಸರಿನಲ್ಲಿ ನಡೆಯುವ ಅನಾಚಾರ ಎಂಬುದನ್ನು ತಿಳಿದು ಕೊಳ್ಳಬೇಕು. ಈ ನಾಟಕವು ಈ ತತ್ತ್ವವನ್ನು ಹೇಳುತ್ತದೆ.

ಈ ನಿಟ್ಟಿನಲ್ಲಿ ಸಮಾಜಕ್ಕೆ ಹಳೆಯ ವಿಷಯವನ್ನೇ ಹೊಸ ರೀತಿಯಲ್ಲಿ ತೆರೆದಿಟ್ಟಿದ್ದಾರೆ. ಈ ಎಲ್ಲಾ ದೃಷ್ಟಿಯಿಂದ ಸಾಹಿತ್ಯ ಕ್ಷೇತ್ರದಲ್ಲಿ ಬಹಳ ಪ್ರಾಮುಖ್ಯತೆಯನ್ನು ಈ ನಾಟಕ ಪಡೆದುಕೊಂಡಿದೆ. 'ರಾವಿನದಿಯ ದಂಡಯೆಲ್ಲಿ' ನಾಟದಲ್ಲಿ ಅಂದಿನ ಕಾಲಘಟ್ಟಕ್ಕೆ ಇದ್ದಂತಹ ಸಮಸ್ಯೆಗಳನ್ನು ಭೇದಿಸಿ ಹೊಸ ರೂಪದ ಉತ್ತರ ಕೊಡಲು ಪ್ರಯತ್ನಿಸಿದ್ದಾರೆ. 'ಜತೆಗಿರುವನು ಚಂದಿರ'ದಲ್ಲಿ ಪರಂಪರೆಯಲ್ಲೇ ತಮ್ಮ ಬದುಕನ್ನು ಕಂಡುಕೊಳ್ಳುವಂತಹ ಮತ್ತು ಹೊಸ ವಿಷಯಗಳನ್ನು ಹೊಸ ನೀತಿಗಳನ್ನು ತಿರಸ್ಕರಿಸುತ್ತಾ ಬರುವುದು ಕಂಡುಬರುತ್ತದೆ. 'ಚೂರಿ ಕಟ್ಟೆ ಅರ್ಥಾತ್ ಕಲ್ಯಾಣಪುರ'ದಲ್ಲಿ 'ಮನುಷ್ಯಧರ್ಮದ ಪರಿಪಾಲನೆಯನ್ನು ಎತ್ತಿ ಹಿಡಿದಿದ್ದಾರೆ' ಹಾಗಾಗಿ ಹೆಚ್ಚು ಮಹತ್ವವನ್ನು ಈ ಕೃತಿಯು ಪಡೆದುಕೊಂಡಿದೆ.

* * *

---

೧: ಸತ್ಸಂಗ- (ಶ್ರೀಶ್ರೀಶ್ರೀ ರವಿಶಂಕರ್)

## ಅಧ್ಯಾಯ – ೮

# ಉಪಸಂಹಾರ

ಮಾನವ ಜೀವನದಲ್ಲಿ ಸಾಮಾಜಿಕ, ರಾಜಕೀಯಗಳು ಹೇಗೆ ಹಾಸುಹೊಕ್ಕಾಗಿದೆಯೋ ಹಾಗೆ ಭಾರತದೇಶದಲ್ಲಿ 'ಕೋಮುವಾದ' ಎಂಬುದು ಹಾಸುಹೊಕ್ಕಾಗಿದೆ. ಸ್ವಾತಂತ್ರ ಪೂರ್ವದಲ್ಲಿ ಇದ್ದಂತಹ ಹಿಂದೂ–ಮುಸ್ಲಿಂ ಎಂಬ ಕೋಮುವಾದವು ಆಧುನಿಕ ಯುಗದಲ್ಲೂ ಕಂಡುಬರುತ್ತದೆ. ಕೋಮುವಾದದಿಂದ ಆದಂತಹ ಅನಾಹುತವನ್ನು ಹಿಂದಿನಿಂದಲೂ ನೋಡಿಕೊಂಡೇ ಬಂದ್ದಿದ್ದೇವೆ. ಆದರೂ, ಇಂದಿಗೂ ಸಮಾಜದಲ್ಲಿ ಕೋಮುವಾದವಿರುವುದು ವಿಪರ್ಯಾಸವೇ ಸರಿ.

ಕೋಮುವಾದವನ್ನು ಕೋಮುಸೌಹಾರ್ದತೆಯನ್ನಾಗಿ ಪರಿತವರ್ತಿಸಲು ಭಾರತ ಸರ್ಕಾರವು ಬಹಳಷ್ಟು ಕಾರ್ಯವನ್ನು ಹಮ್ಮಿಕೊಂಡು ಕಾರ್ಯರೂಪಕ್ಕೆ ತರುವ ಪ್ರಯತ್ನ ಮಾಡಿದೆ. ಸಮಾಜಕ್ಕೆ ಕೋಮು ಸೌಹಾರ್ದತೆಯ ಸಂದೇಶವನ್ನು ಸಾರಲು ಅನೇಕ ಸಾಹಿತ್ಯ ಕೃತಿಗಳು ರಚಿತವಾಗಿದೆ. ಇದರ ಉದ್ದೇಶ ಸಮಾಜದಲ್ಲಿ ಹಿಂದೂ–ಮುಸ್ಲಿಂ ಎಂಬ ಕೋಮುವಾದದ ಪಿಡುಗನ್ನು ನಿವಾರಿಸಿ ಕೋಮುಸೌಹಾರ್ದತೆಯನ್ನು ಸಾರುವುದೇ ಆಗಿದೆ.

ಈ ನಿಟ್ಟಿನಲ್ಲಿ 'ಕೋಮು ಸೌಹಾರ್ದತೆಯನ್ನು ಬಿಂಬಿಸುವ ಮೂರುನಾಟಕಗಳು' ಎಂಬ ಶೀರ್ಷಿಕೆಯನ್ನು ಇಟ್ಟುಕೊಂಡು, 'ರಾವಿನದಿಯ ದಂಡೆಯಲ್ಲಿ' 'ಜತೆಗಿರುವನು ಚಂದಿರ', 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ಎಂಬ ಮೂರು ನಾಟಕಗಳಲ್ಲಿ ಹೇಗೆ ಕೋಮುಸೌಹಾರ್ದತೆಯು ಬಿಂಬಿತವಾಗಿದೆ ಎಂಬುದನ್ನು ಚರ್ಚಿಸಲಾಗಿದೆ. ಈ ನಿಬಂಧದಲ್ಲಿ ಒಟ್ಟಾರೆಯಾಗಿ ವ್ಯಕ್ತಗೊಂಡಿರುವ ಅಂಶಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

ಒಟ್ಟು ಈ ಉಪಸಂಹಾರವು ಸೇರಿ ಎಂಟು ಅಧ್ಯಾಯಗಳಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಬಿಡಿ–ಬಿಡಿಯಾಗಿ ನಿರೂಪಿಸಲಾಗಿದೆ.

ಮೊದಲನೆಯ ಅಧ್ಯಾಯದಲ್ಲಿ – ಪ್ರಸ್ತುತ ವಿಷಯವನ್ನು ಆಯ್ದುಕೊಂಡ ಉದ್ದೇಶ, ವಿಷಯವ್ಯಾಪ್ತಿ, ಈ ವಿಷಯಕ್ಕೆ ಸಂಬಂಧಿಸಿದ ಹಿನ್ನೆಲೆಯನ್ನು ಗಮನದಲ್ಲಿಟ್ಟುಕೊಂಡು, ಈ ನಾಟಕಗಳು ಅಧ್ಯಯನಕ್ಕೆ ಎಷ್ಟು ಸೂಕ್ತ ಎಂಬುದನ್ನು ವಿವರಿಸಲಾಗಿದೆ.

ಎರಡನೇಯ ಅಧ್ಯಾಯದಲ್ಲಿ – 'ರಾವಿನದಿಯ ದಂಡೆಯಲ್ಲಿ' ನಾಟಕದ ಅನುವಾದಕಾರರಾದ ಡಾ. ತಿಪ್ಪೇಸ್ವಾಮಿಯವರ ಪರಿಚಯವನ್ನು ಮಾಡಿಕೊಡಲಾಗಿದೆ. ನಾಟಕದ ವಸ್ತುವು ಯಾವ ಸ್ವರೂಪದ್ದಾಗಿದೆ ಮತ್ತು ನಾಟಕದ ಕಥಾವಿನ್ಯಾಸ ಹೇಗೆ ಮೂಡುಬಂದಿದೆ ಎಂಬುದನ್ನು ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ – 'ಜತೆಗಿರುವನು ಚಂದಿರ' ನಾಟಕದ ಅನುವಾದಕಾರಾದ ಜಯಂತ್ ಕಾಯ್ಕಿಣಿಯವರ ಪರಿಚಯ ಮಾಡಿಕೊಟ್ಟು, ನಾಟಕದ ವಸ್ತುವಿನ ಸ್ವರೂಪ ಮತ್ತು ಕಥಾವಿನ್ಯಾಸ ಮುಂತಾದವುಗಳನ್ನೆಲ್ಲಾ ವಿವರಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ – 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ನಾಟಕದ ಕರ್ತೃವಾದ ಕೆ.ವಿ. ಅಕ್ಷರರವರ ಪರಿಚಯ ಮಾಡಿಕೊಟ್ಟು, ನಾಟಕದಲ್ಲಿ ವಸ್ತುವನ್ನು ಹೇಗೆ ಬಳಸಿಕೊಂಡಿದ್ದಾರೆ ಎಂದು ಹೇಳುವುದರ ಜೊತೆಗೆ ಕಥಾ ವಿನ್ಯಾಸದ ಶೈಲಿಯ ಬಗ್ಗೆ ವಿವರಿಸಲಾಗಿದೆ.

ಐದನೇ ಅಧ್ಯಾಯದಲ್ಲಿ – ಮೇಲೆ ಮೂರು ನಾಟಕಗಳಲ್ಲಿ ಹೇಳಿದಂತಹ ವಸ್ತುವಿನ ಸ್ವರೂಪ ಮತ್ತು ಕಥಾವಿನ್ಯಾಸಗಳನ್ನು ಇಟ್ಟುಕೊಂಡು ಹೇಗೆ ಮೂರು ನಾಟಕಗಳಲ್ಲಿ 'ಪಾತ್ರ ಚಿತ್ರಣ' ಮತ್ತು 'ತಂತ್ರ'ಗಳ ಅಳವಡಿಕೆಯಾಗಿದೆ ಎಂಬುದನ್ನು ಸುಧೀರ್ಘವಾಗಿ ಚರ್ಚಿಸಲಾಗಿದೆ.

ಮೂರು ನಾಟಕಗಳಲ್ಲಿ ಬರುವಂತಹ ಮುಖ್ಯಪಾತ್ರಗಳು, ಅವುಗಳಿಗೆ ಪೂರಕವಾಗಿ ಬರುವಂತಹ ಪಾತ್ರಗಳು, ಅವು ನಿರ್ವಹಿಸುವ ಕೆಲಸಗಳನ್ನು ಹೇಳಲಾಗಿದೆ. ಪಾತ್ರಗಳ ಮುಖಾಂತರವೇ ನಾಟಕಕಾರರು ಸಮಾಜಕ್ಕೆ ಹೊಸದೊಂದು ಸಂದೇಶವನ್ನು ಕೊಡಲು ಬಯಸುತ್ತಾರೆ. ಇದನ್ನು "ಮೂರು ನಾಟಕಗಳಲ್ಲಿನ ಪಾತ್ರ ಚಿತ್ರಣ ಮತ್ತು ತಂತ್ರಗಳ ಅಳವಡಿಕೆ ಎಂಬ ಶೀರ್ಷಿಕೆಯಡಿಯಿಲ್ಲಿ ವಿವರಿಸಲಾಗಿದೆ.

ಆರನೇ ಅಧ್ಯಾಯದಲ್ಲಿ – ಮೂರು ನಾಟಕಗಳ ತೌಲನಿಕ ಅಧ್ಯಯನವನ್ನು ಮಾಡಲಾಗಿದೆ. ಮೂರು ನಾಟಕಗಳಲ್ಲಿ ಕಂಡುಬರುವಂತಹ ಸಾಮ್ಯತೆ, ವೈಷಮ್ಯಗಳನ್ನು ಹೇಳಲಾಗಿದೆ. ತೌಲನಿಕ ಅಧ್ಯಯವನ್ನು ನಾಲ್ಕು ವಿಭಾಗಗಳಾಗಿ ವಿಭಾಗಿಸಿಕೊಂಡು, ವಸ್ತುವಿನ ದೃಷ್ಟಿಯಿಂದ, ಪಾತ್ರಗಳ ದೃಷ್ಟಿಯಿಂದ ನಾಟಕಗಳಲ್ಲಿನ ದೃಷ್ಟಿಕೋನದಿಂದ ಮತ್ತು ಅದನ್ನು ಹೇಗೆ ನಾಟಕಕಾರರು ಅಭಿವ್ಯಕ್ತಿಸಿದ್ದಾರೆ ಎಂಬುದನ್ನು ಹೇಳಲಾಗಿದೆ.

ಹೀಗೆ ಈ ಅಧ್ಯಾಯದಲ್ಲಿ ಮೂರು ನಾಟಕವನ್ನು ಪರಸ್ಪರ ತುಲನಾತ್ಮಕ ದೃಷ್ಟಿಯಿಂದ ವಿಶ್ಲೇಷಿಸಲಾಗಿದೆ. ವಸ್ತು, ಪಾತ್ರ, ದೃಷ್ಟಿಕೋನ, ಅಭಿವ್ಯಕ್ತಿಗಳಲ್ಲಿ ಕಂಡುಬರುವ ಸಾಮ್ಯತೆ, ಭಿನ್ನತೆಗಳನ್ನು ಹೇಳುವ ಪ್ರಯತ್ನ ಇಲ್ಲಾಗಿದೆ.

ಏಳನೇ ಅಧ್ಯಾಯದಲ್ಲಿ – ಹಿಂದಿನ ಅಧ್ಯಾಯಗಳನ್ನು ಆಧಾರವಾಗಿಟ್ಟುಕೊಂಡು 'ರಾವಿನದಿಯ ದಂಡೆಯಲ್ಲಿ' 'ಜತೆಗಿರುವನು ಚಂದಿರ', 'ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ' ನಾಟಕಗಳು ಸಾಹಿತ್ಯಿಕವಾಗಿ ಅದರ ಮಹತ್ವವೇನು? ಅವುಗಳ ಶ್ರೇಷ್ಠತೆಯ ಮಟ್ಟವೆಷ್ಟು, ಯಾವ ನಾಟಕವು ಸಾರ್ವತ್ರಿಕವಾದಂತಹ ವಿಷಯವನ್ನು ಹೇಳುತ್ತದೆ ಮತ್ತು ಸಾಹಿತ್ಯದ ಮುಖಾಂತರ ಜನರಿಗೆ ಹೇಗೆ ಸಂದೇಶ ಮನದಟ್ಟಾಗಲು ಸಾಧ್ಯವಾಯಿತು ಎಂಬೆಲ್ಲಾ ವಿಷಯಗಳನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

ನಮ್ಮ ದೇಶಕ್ಕೆ ಬ್ರಿಟೀಷರಿಂದ ಸಿಕ್ಕ ಬಳುವಳಿ ಎಂದರೆ, ದೇಶವಿಭಜನೆ, ಇದರ ಬೆನ್ನಹಿಂದೆಯೇ ಹುಟ್ಟಿಕೊಂಡಿದ್ದು ಕೋಮುಗಲಭೆ. ನಗರಪ್ರದೇಶವೇ ಇದಕ್ಕೆ ತಾಣ. "ಸ್ವಾತಂತ್ರ್ಯಾನಂತರದ ಐವತ್ತು ವರ್ಷಗಳಲ್ಲಿ

ಅರವತ್ತು ಸಹಸ್ರ ಕೋಮುಗಲಭೆಗಳಾಗಿವೆ. ಇಂದಿರಾಗಾಂಧಿ ಹತ್ಯೆ, ೧೯೯೨ರ ಬಾಬ್ರಿಮಸೀದಿ ಪ್ರಕರಣ, ಬಾಬುಬುಡನ್‌ಗಿರಿ ಪ್ರಸಂಗ, ಇದಕ್ಕಾಗಿ ಬಲಿಯಾದವರು ಲಕ್ಷಾಂತರ ಮಂದಿ. ಇದಕ್ಕೆ ಪರಿಹಾರವೆಂಬಂತೆ, ಹಿಂದೂ-ಮುಸ್ಲಿಂ ಬಾಂಧವರನ್ನು ಒಗ್ಗೂಡಿಸುವ ಘೋಷಣೆಯು ಕಂಡುಬರುತ್ತಿದೆ. ಆದರೆ, ಇದರಿಂದ ಪರಿಹಾರ ಅಸಾಧ್ಯ. ರಾಜಕೀಯ, ಆರ್ಥಿಕ, ಸಾಮಾಜಿಕ, ಸ್ವಾರ್ಥಕಾರಣವಾಗಿ ಚದುರಿಕೊಂಡಿರುವ ಗುಂಪುಗಳನ್ನು ಮತ್ತೆ ಒಗ್ಗೂಡಿಸಬೇಕು. ಕೂಡಿ ಬಾಳದೇ ಹೋದರೆ ಮಸಣದಲ್ಲಿಯೇ ಒಂದಾಗ ಬೇಕಾದೀತು ಎಂಬ ಸತ್ಯವನ್ನು ಮನಗಾಣಬೇಕು.[೧]

**"ಮನುಷ್ಯರನ್ನು ಮನುಷ್ಯರು ಅರ್ಥಮಾಡಿಕೊಳ್ಳುವಂತಾಗಬೇಕು. ಪರಸ್ಪರ ಸೇರಬೇಕು, ಮಾನವತೆ, ಅಂತಃಕರಣ, ಪ್ರೀತಿ-ವಿಶ್ವಾಸಗಳಿಗಾಗಿ ತುಡಿಯಬೇಕು. ಸಂಪೂರ್ಣ ಸಹನೆ, ಸಹಕಾರ ಹೊಂದಿ, ಆತ್ಮೀಯತೆಯಿಂದ ಒಗ್ಗೂಡಿ ಜೀವನ ನಿರ್ವಹಿಸಬೇಕು. ಇದು ನಿಜವಾದ ಅರ್ಥದಲ್ಲಿ ಕೋಮು ಸೌಹಾರ್ದತೆ ಎನ್ನಿಸುವುದು.**[೨]

ಹಿಂದೂ ಧರ್ಮೀಯರ ಪ್ರಕಾರ ಕೋಮುವಾದವನ್ನು ಸೃಷ್ಟಿಸಿದವರು ಇಸ್ಲಾಂಧರ್ಮೀಯರೇ, ಮತ್ತು ಮುಸ್ಲಿಂಮರ ದೇಶ ಪ್ರೇಮವನ್ನು ಅನುಮಾನದಿಂದ ನೋಡುವುದು ನಮ್ಮಲ್ಲಿ ಹೆಚ್ಚಿನವರಿಗೆ ಅಭ್ಯಾಸವಾಗಿದೆ.

ಇಸ್ಲಾಂ ದೊರೆಯಾದ 'ಅಕ್ಬರ್' ಮತ್ತು 'ಟಿಪ್ಪುಸುಲ್ತಾನ'ರ ಧರ್ಮಸಹಿಷ್ಣುತೆಯನ್ನು ಯಾಕೆ ಮರೆಯುತ್ತಾರೆ? ಎಷ್ಟೋ ಹಿಂದೂ ರಾಜರುಗಳು ಬೌದ್ಧವಿಹಾರಗಳನ್ನು, ಜೈನ ಬಸದಿಗಳನ್ನು ಲೂಟಿ ಮಾಡಿಕೆಡವಿದ್ದಾರೆ, ಮುಸ್ಲಿಂ ರಾಜರ ಅಸಹಿಷ್ಣುತೆಯ ಬಗ್ಗೆ ಮಾತ್ರ ಹೇಳುವವರು, ಹಿಂದೂ ರಾಜರ ಅಸಹಿಷ್ಣುತೆಯನ್ನು ಯಾಕೆ ಮರೆಯುತ್ತಾರೆ?

**"ಸಹಿಷ್ಣುತೆ - ಅಸಹನೆ- ಈ ಎರಡೂ ಗುಣಗಳೂ ಯಾವುದೇ ಧರ್ಮದ ಏಕಸ್ವಾಮ್ಯವೂ ಅಲ್ಲ; ಸ್ಥಿರವಾದ ಗುಣಗಳೂ ಅಲ್ಲ. ಪ್ರತಿಯೊಂದು ಧರ್ಮವೂ ಪರಧರ್ಮ ಸಹಿಷ್ಣುತೆಯನ್ನು ಬೋಧಿಸುತ್ತಲೇ ಕಾಲದಿಂದ ಕಾಲಕ್ಕೆ ಅಸಹಿಷ್ಣುತೆಯನ್ನು ತೋರುತ್ತಾ ಬಂದಿದೆ".**[೩]

ಹೀಗೆ ಗತಕಾಲದ ಬಗ್ಗೆ ಸುಳ್ಳುಗಳನ್ನು ಹೇಳುವುದು ಮತೀಯವಾದದ ಒಂದು ತಂತ್ರವಾದರೆ, ಮುಸ್ಲಿಂರ ಬಗ್ಗೆ ಅಪಪ್ರಚಾರ ಮಾಡುವುದು ಇನ್ನೊಂದು ತಂತ್ರವಾಗಿದೆ. ಭಾರತದ ವಿಭಜನೆಗೆ ಮುಸ್ಲಿಂರು ಕಾರಣ ಎನ್ನುವುದು ಮತೀಯವಾದವಾಗಿದೆ. ಇದರ ಪೂರ್ಣಲಾಭವನ್ನು ರಾಜಕಾರಣಿಗಳು ತೆಗೆದುಕೊಂಡಿದ್ದಾರೆ. ಭಾರತದ ರಾಜಕಾರಣವನ್ನು ಕೋಮುವಾದಿ ಕಾರಣಕ್ಕೊಳಪಡಿಸಿಕೊಂಡಿದ್ದಾರೆ. ಇದಕ್ಕೆ - ಬಾಬರೀ ಮಸೀದಿ - ರಾಮಮಂದಿರ ಪ್ರಕರಣವನ್ನೇ ತೆಗೆದುಕೊಳ್ಳಬಹುದು. ಬಾಬರೀ ಮಸೀದಿಯನ್ನು ಉರುಳಿಸುವುದೇ ಅವರ ಮುಖ್ಯ ಉದ್ದೇಶವಾಗಿತ್ತೇ ವಿನಃ. ರಾಮಮಂದಿರ ಕಟ್ಟುವುದಲ್ಲ, ಜನ ಜೀವನದ ಮಧ್ಯೆ ವಿಭಜನೆಯನ್ನು ತೀವ್ರಗೊಳಿಸುವುದೇ ಅವರ ಉದ್ದೇಶವಾಗಿತ್ತೆಂದು ಸ್ಪಷ್ಟವಾಗಿ ತಿಳಿಯುತ್ತೇವೆ.

---

**೧: ಕನ್ನಡ ಸಾಹಿತ್ಯ : ಕೋಮು ಸೌಹಾರ್ದತೆ (ಪುಟ-೩)**

**೨: ಕನ್ನಡ ಸಾಹಿತ್ಯ : ಕೋಮು ಸೌಹಾರ್ದತೆ (ಪುಟ-೨)**

**೩: 'ರಥಯಾತ್ರೆ'ಯ ಕುಟೀಲತೆ (ಲೇಖನ; ಪುಟ-೧೧೫)**

ಈ ಕೋಮುವಾದವು ಸ್ವಾತಂತ್ರ್ಯ ಪೂರ್ವದಲ್ಲಿ ಒಂದು ರೀತಿಯದ್ದಾಗಿದ್ದರೆ, ಸ್ವಾತಂತ್ರ್ಯದ ನಂತರ ಅದರ ದಿಶೆಯೇ ಬದಲಾಗಿದೆ. ಈ ಕೋಮುವಾದವನ್ನು ಸೌಹಾರ್ದತೆಯನ್ನಾಗಿ ಪರಿವರ್ತಿಸುವ ಶ್ರಮದಲ್ಲಿ ಬಲಿಯಾಗುವರು ಸಾಮಾನ್ಯರು, ಮುಗ್ಧಜನರು.

ದೇಶಕ್ಕೆ ಸ್ವಾತಂತ್ರ್ಯ ತರಲು ಗಾಂಧಿತತ್ತ್ವ ಅಂದರೆ, ಅಹಿಂಸೆಯನ್ನು ಪಾಲಸಿದರೆ, ದೇಶವಿಭಜನೆಗೆ ಕೋಮುವಾದ ಎಂಬ ಹಿಂಸೆಯನ್ನು ಅಸ್ತ್ರವನ್ನಾಗಿಟ್ಟುಕೊಂಡರು. ಇದಕ್ಕಾಗಿ ನಡೆದಂತಹ ಕೊಲೆ, ಸುಲಿಗೆ, ಅತ್ಯಾಚಾರಗಳು ಅಸಂಖ್ಯಾತವೆಂದೇ ಹೇಳಬೇಕು. ಇದಕ್ಕೆಲ್ಲಾ ಪರಿಹಾರವಿರುವುದು 'ಕೋಮುಸೌಹಾರ್ದತೆ' ಎಂಬ ಮಂತ್ರದಲ್ಲಿ.

'ಕೋಮು ಸೌಹಾರ್ದತೆ' ಎಂಬುದು ಪ್ರಸ್ತುತ ಸಮಾಜಕ್ಕೂ ಆದರ್ಶವಾದಂತಹ ಮಾತು ಎಂದೇ ಹೇಳಬಹುದು. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಂತಹ ಮೂರೂ ನಾಟಕಗಳು ಹೇಳುವುದು ಇದೇ ಕೋಮುಸೌಹಾರ್ದತೆಯನ್ನೇ. ಸಮಾಜಕ್ಕೆ ಈ ಸಂದೇಶ ಕೊಡಲು ಸಾಹಿತ್ಯದ ಮುಖಾಂತರವಾಗಿ ಈ ನಾಟಕಗಳು ಹೊರಹೊಮ್ಮಿದೆ. ಮುಂದೇನೂ ಇಂತಹ ಹಲವು ನಾಟಕಗಳು ಕಥೆಗಳು ಬರಬಹುದು. ಅದು ಯಶಸ್ವಿಯಾಗ ಬೇಕಾದರೆ ಜನರ ಮೂಲಭೂತ ಮನಸ್ಸು ಬದಲಾಗಬೇಕು. ಸಾಮಾನ್ಯ ಜನರ ಮನಸ್ಸನ್ನು ಬದಲಾಗದೇ ಇರುವಂತೆ ಮಾಡುವಲ್ಲಿ ಪ್ರಸ್ತುತ ರಾಜಕಾರಣದ ಪಾಲು ಹೆಚ್ಚಾಗಿಯೇ ಇದೆ. ಅಧಿಕಾರದ ಆಸೆ, ಹಣದ ಆಸೆಯಿಂದಾಗಿ ಸಾಮಾನ್ಯ, ಮುಗ್ದ ಜನರ ಮೇಲೆ ಈ ಕೋಮುವಾದವೆಂಬ ಹೊರಲಾರದಂತಹ ಹೊರೆಯನ್ನು ಹೊರಿಸಿದ್ದಾರೆ. ಇದರಿಂದ ತೊಂದರೆಗೆ ಒಳಗಾದವರು ಸಾಮಾನ್ಯ, ಮುಗ್ಧ ಜನರೇ ಹೊರತು ರಾಜಕಾರಣದವರಲ್ಲ. ಇದಲ್ಲದರಿಂದ ಹೊರಬರಲು ಒಂದು ಜಾಗೃತ ಸಮಾಜವು ನಿರ್ಮಾಣವಾಗಬೇಕಾಗಿದೆ. ಇದಕ್ಕಾಗಿ ಜನರಿಗೆ ಬೇಕಾದದ್ದು ಶಿಕ್ಷಣ. ಸುಶಿಕ್ಷಿತ ಸಮುದಾಯದಿಂದ ಮಾತ್ರ ಈ ಕೋಮುವಾದವನ್ನು ನಾಶಮಾಡಿ ಕೋಮುಸೌಹಾರ್ದತೆಯನ್ನು ಸೃಷ್ಟಿಸಬಹುದು.

ಹಿಂದೂಗಳು ಮುಸ್ಲಿಂರನ್ನು ತಮ್ಮವರೆಂದು, ಮುಸ್ಲಿಂರು ಹಿಂದೂಗಳನ್ನು ತಮ್ಮವರೆಂದು ತಿಳಿದುಕೊಂಡರೆ ಈ ದೇಶವು ಕೋಮುವಾದದಿಂದ ಮುಕ್ತವಾಗಬಹುದೆಂಬ ಕಲ್ಪನೆಯನ್ನು ಅಧ್ಯಯಕ್ಕೆ ಒಳಪಡಿಸಿಕೊಂಡಂತ ಮೂರು ನಾಟಕಗಳಲ್ಲೂ ಕಂಡುಬರುವಂತಹ ಸಾಮಾನ್ಯ ವಿಷಯವಾಗಿದೆ.

* * *

# ಗ್ರಂಥ ಋಣ


೧. ಕನ್ನಡ ಸಾಹಿತ್ಯ : ಕೋಮು ಸೌಹಾರ್ದತೆ – ಡಾ. ವ್ಹಿ. ಜಿ. ಪೂಜಾರ್
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ (೨೦೦೬)

೨. ಕರ್ತವ್ಯವನ್ನು ಮರೆತ ಪೊಲೀಸರು : ಮನುಷ್ಯತ್ವವನ್ನೇ ಮರೆತ ಕೋಮುವಾದಿಗಳು – ರಾಷ್ಟ್ರೀಯ ಮಾನವ ಹಕ್ಕು
ಆಯೋಗದ ವರದಿಗಳು.

೩. ಕಾಡು ಮತ್ತು ತೋಪು – ಲೇಖನ (ಧರ್ಮ ಮತ್ತು ಪರಿಸರ)
ಹಂಪಿ ಕನ್ನಡ ವಿಶ್ವವಿದ್ಯಾಲಯದ ಧರ್ಮ ಕುರಿತ
ವಿಶ್ವಕೋಶಕ್ಕಾಗಿ ರಚಿತವಾದಂತಹ ಲೇಖನ
(೧೯-೧೨-೯೯)

೪. ಕೋಮು ಆಕ್ರಮಣ – ಶಿವಸುಂದರ್
ಸಂವಾದ ಪತ್ರಿಕೆ (ನವೆಂಬರ್ – ೨೦೦೪)

೫. ಕೋಮುವಾದವನ್ನು ಮಟ್ಟಹಾಕಬೇಕೆಂದರೆ... – ಅಯ್ಯಪ್ಪ ಹೂಗಾರ್
ವರ್ಗ ಸಮರ (ಲೇಖನ)
(ಡಿಸೆಂಬರ್ – ೨೦೦೪)

೬. ಕೋಮುವಾದವನ್ನು ಹಿಮ್ಮೆಟ್ಟಿಸುವತ್ತ..... – ಸಂವಾದ (ಮೇ ೨೦೦೪)
ಪತ್ರಿಕೆಯಲ್ಲಿ ಪ್ರಕಟವಾದ ಲೇಖನ

೭. ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ – ಕೆ.ವಿ. ಅಕ್ಷರ
ಅಕ್ಷರ ಪ್ರಕಾಶನ ಹೆಗ್ಗೋಡು
ಸಾಗರ ಕರ್ನಾಟಕ (೨೦೦೧)

೮. ಜತೆಗಿರುವನು ಚಂದಿರ – ಜಯಂತ್ ಕಾಯ್ಕಿಣಿ
(ಅನುವಾದಕಾರರು)
ಅಂಕಿತ ಪುಸ್ತಕ, ಬೆಂಗಳೂರು (೨೦೦೧)

೯. ಮಾನವತೆಯ ತುಡಿತಗಳು – ಸಂಪಾದಕರು : ಬಿಸ್ಲೇಹಳ್ಳಿ ಪ್ರಭು
ಲೇಖಕರು : ಜಿ. ರಾಜಶೇಖರ್
ತಾರಾಪ್ರಿಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್,
ಮೈಸೂರು

೧೦. ರಾವಿನದಿಯ ದಂಡೆಯಲ್ಲಿ – ಡಾ॥ ತಿಪ್ಪೇಸ್ವಾಮಿ
(ಅನುವಾದಕಾರರು) ದ್ವಿತೀಯ ಮುದ್ರಣ ೨೦೦೨
ಸಂವಹನ (ಶಿವರಾಂಪೇಟೆ) ಮೈಸೂರು

೧೧. ಸತ್ಸಂಗ – ಪರಮ ಪೂಜ್ಯ ಶ್ರೀ ಶ್ರೀ ರವಿಶಂಕರ್
ಜ್ವಾಲಾಮುಖಿ ಚಾಜ್ ಪ್ರೆಸ್,
ಬೆಂಗಳೂರು (೨೦೦೫)




# ರಾವಿ ನದಿಯ ದಂಡೆಯಲ್ಲಿ

ನಾಟಕ

ಮೂಲ ಹಿಂದಿ: ಅಸಗರ್ ವಜ಼ಾಹತ್

ಅನುವಾದ: ಡಾ. ತಿಪ್ಪೇಸ್ವಾಮಿ

ಪ್ರಕಾಶನ: ಸಂವಹನ, ಶಿವರಾಂಪೇಟೆ, ಮೈಸೂರು, ಕರ್ನಾಟಕ






ಜಯಂತ ಕಾಯ್ಕಿಣಿ

# ಜತೆಗಿರುವನು ಚಂದಿರ

ನಾಟಕ

ಲೇಖಕರು: ಜಯಂತ ಕಾಯ್ಕಿಣಿ

ಪ್ರಕಾಶನ: ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ – 2001






ಅಕ್ಷರ ಕೆ.ವಿ.

# ಚೂರಿಕಟ್ಟೆ ಅರ್ಥಾತ್ ಕಲ್ಯಾಣಪುರ

ನಾಟಕ

ಲೇಖಕರು: ಅಕ್ಷರ ಕೆ.ವಿ.

ಪ್ರಕಾಶನ: ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ – 2001